# ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ

ಸಂಪುಟ ೬೮ / ಸಂಚಿಕೆ ೧

ಜೂನ್ ೧೯೮೩





ಕನ್ನಡ ಸಾಹಿತ್ಯ ಪರಿಷತ್ತು

ಪಂಪಮಹಾಕವಿ ರಸ್ತೆ / ಚಾಮರಾಜಪೇಟೆ / ಬೆಂಗಳೂರು ೫೬೦ ೦೧೮

## ವಿನಿಮಯಕ್ಕೆ ಬಂದ ಪತ್ರಿಕೆಗಳು

ದಿನಪತ್ರಿಕೆಗಳು: (೧) ಉದಯವಾಣಿ, ಮಣಿಪಾಲ (ದ. ಕ.) (೨) ಜನವಾಣಿ, ಬೆಂಗಳೂರು (೩) ಮೈಸೂರು ಪತ್ರಿಕೆ, ಮೈಸೂರು (೪) ಜನಮಿತ್ರ, ಹಾಸನ (೫) ಉದಯ, ಬಿಜಾಪುರ (೬) ನಾಡೋಜ, ಬೆಳಗಾವಿ (೭) ವಿಜಯವಾಣಿ, ತುಮಕೂರು. (೮) ರಾಯಚೂರು ವಾಣಿ, ರಾಯಚೂರು. (೯) ಕೋಲಾರ ಪತ್ರಿಕೆ (೧೦) ನವೋದಯ, ಗದಗ–ಬೆಟಗೇರಿ (೧೧) ನೇತಾಜಿ, ಹುಬ್ಬಳ್ಳಿ (೧೨) ರಾಷ್ಟ್ರಬಂಧು, ವಿರಾಜಪೇಟೆ (೧೩) ಲೋಕದರ್ಶನ, ಬೆಳಗಾವಿ.

ವಾರಪತ್ರಿಕೆಗಳು: (೧) ಕರ್ನಾಟಕ ವೈಭವ, ವಿಜಾಪುರ (೨) ಕಾನಡಾ ವೃತ್ತ, ಕುಮಟ (೩) ಕೈಫಿಯಾತ್ (ಹಿಂದಿ), ಬೆಳಗಾವಿ (೪) ಜನಜೀವಾಳ, ಬೆಳಗಾವಿ (೫) ಪ್ರಪಂಚ ಹುಬ್ಬಳ್ಳಿ (೬) ಬೆಳಕು, ಮೈಸೂರು (೭) ರಾಯಭಾರಿ, ಉಡುಪಿ (೮) ವಿಶ್ವಕಲ್ಯಾಣ, ಯಾದಗಿರಿ (೯) ವಿಕ್ರಮ, ಬೆಂಗಳೂರು (೧೦) ಶರಾವತಿ, ಶಿವಮೊಗ್ಗ (೧೧) ಸಂದರ್ಶನ, ಬಿಜಾಪುರ (೧೨) ಸತ್ಯವಾದಿ, ಮೈಸೂರು (೧೩) ಸಿರಸಿ ಸಮಾಚಾರ, ಸಿರಸಿ (೧೪) ಸಹಕಾರ, ಬೆಂಗಳೂರು (೧೫) ಸೋವಿಯತ್ ಒಕ್ಕೂಟದ ಸಮಾಚಾರ-ವಿಚಾರ (೧೬) ಪ್ರಯತ್ನ, ಚಿಕ್ಕಮಗಳೂರು (೧೭) ಅರ್ಥವಿಕಾಸ, ಹುಬ್ಬಳ್ಳಿ (೧೮) ಕೆಂಬಾವುಟ, ಬೆಂಗಳೂರು (೧೯) ಬಯಲುಸೀಮೆ, ಚನ್ನಪಟ್ಟಣ (೨೦) ಬಳ್ಳಾರಿ ಬಂಧು, ಬಳ್ಳಾರಿ (೨೧) ರಾಷ್ಟ್ರಮತ,
(೨೩) ಗ್ರಾಮ ಸುದ್ದಿ, ಆನೇಕಲ್ಲು (೨೪) ಹಿರಿಯೂರು



ಗಂಗೋತ್ರಿ, ಮೈಸೂರು (೨) ಸೋವಿಯತ್ ದೇಶ,
ರು (೪) ನುಡಿಜೇನು, ಅಂಕೋಲಾ (೫) ಯಾತ್ರಿಕ,
. (೭) ಸಮನ್ವಯ, ಮೈಸೂರು.

ತ್ಮ ಪ್ರಕಾಶ, ಹೊಳೆನರಸೀಪುರ (೨) ಗಾಯನಗಂಗಾ,
ರಾಸು (೪) ಜಿನವಾಣಿ, ಮೈಸೂರು (೫) ಧನ್ವಂತರಿ,
ರು (೭) ದಾಸವಾಣಿ, ಬೆಂಗಳೂರು (೮) ಪ್ರಭಾತ,
ಹುಬ್ಬಳ್ಳಿ (೧೦) ಪಂಚಾಕ್ಷರ ಪ್ರಕಾಶ, ಗದಗ
ಡ (೧೨) ಭಾರತ ದರ್ಶನ, ಬೆಂಗಳೂರು
(೧೪) ಮೈಸೂರು ಸಹಕಾರ. ಪತ್ರಿಕೆ,
ಪತ್ರಿಕೆ, ಬೆಂಗಳೂರು (೧೬) ಮೊಗವೀರ,
(೧೮) ವಿವೇಕಾಭ್ಯುದಯ, ಶ್ರವಣಬೆಳಗೊಳ
ಸುಧಾ, ಬೆಂಗಳೂರು (೨೧) ಸೋವಿಯತ್
ಕೆ, ಹಾವೇರಿ (೨೩) ಪ್ರದೀಪ, ಧಾರವಾಡ
ಕ್ರೀಡಾಂಗಣ, ಬೆಳಗಾವಿ (೨೬) ತುಷಾರ,

(ರಕ್ಷಾಪತ್ರದ ೩ನೆಯ ಪುಟವನ್ನು ನೋಡಿ)

# ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ

ಸಂಪುಟ ೬೮ ಸಂಚಿಕೆ ೧

ಜೂನ್ ೧೯೮೩

ಆರ್. ವಿ. ಕುಲಕರ್ಣಿ ಲಕ್ಷ್ಮಣ್ ತೆಲಗಾವಿ

ಸಂಪಾಧಕರು

ಕನ್ನಡ ಸಾಹಿತ್ಯ ಪರಿಷತ್ತು

ಚಾಮರಾಜಪೇಟೆ ಬೆಂಗಳೂರು ೧೮

## ಪರಿವಿಡಿ

# ಕನ್ನಡ ಲಕ್ಷಣಗ್ರಂಥಗಳ ಸಂಪಾದನೆ

ಡಾ॥ ಟಿ. ವಿ. ವೆಂಕಟಾಚಲಶಾಸ್ತ್ರೀ

೧

## ಕನ್ನಡ ವ್ಯಾಕರಣ ಗ್ರಂಥಗಳು

ಕನ್ನಡ ಭಾಷೆಯ ಸ್ವತಂತ್ರ ವ್ಯಾಕರಣಗ್ರಂಥಗಳಲ್ಲಿ ಇಮ್ಮಡಿ ನಾಗವರ್ಮ ಸಂಸ್ಕೃತದಲ್ಲಿ ಬರೆದಿರುವ 'ಕರ್ಣಾಟಕ ಭಾಷಾಭೂಷಣ', ಕೇಶಿರಾಜನ 'ಶಬ್ದಮಣಿ ದರ್ಪಣ' ಮತ್ತು ಭಟ್ಟಾಕಳಂಕನ 'ಕರ್ಣಾಟಕ ಶಬ್ದಾನುಶಾಸನ' ಇವು ಮಾತ್ರವೇ ಪ್ರಾಚೀನ ಗ್ರಂಥಗಳಾಗಿದ್ದು, ಗ್ರಂಥಸಂಪಾದನೆಯ ದೃಷ್ಟಿಯಿಂದ ಗಮನಿಸಬೇಕಾದ ವಾಗಿವೆ.

ನಾಗವರ್ಮನ 'ಕಾವ್ಯಾವಲೋಕನ'ದ ಭಾಗವಾದ 'ಶಬ್ದಸ್ಮೃತಿ' ಕರ್ಣಾಟಕ ಕಾವ್ಯಮಂಜರಿಯವರಿಂದ ಪ್ರಕಟವಾಗಿದೆ. ಸಂಪಾದಕರು ಯಾರು ಎಂಬುದು ತಿಳಿ ಯುವುದಿಲ್ಲ; ಪ್ರಕಟನವರ್ಷವೂ ತಿಳಿಯುವುದಿಲ್ಲ. ಗ್ರಂಥಪಾಠವನ್ನು ಮುದ್ರಿಸಿ, ಅಡಿರೇಖೆಯ ಕೆಳಗೆ ಪ್ರಾಚೀನ ಕನ್ನಡ ವ್ಯಾಕರಣಗಳ ಸಂವಾದಿ ಸೂತ್ರ ವೃತ್ತಿ ಲಕ್ಷ್ಯಗಳನ್ನು ಉದಾಹರಿಸಿದೆ. ಇನ್ನೊಂದು ಅಡಿರೇಖೆಯ ಕೆಳಗೆ ಕೆಲವು ಪಾಠಾಂತರ ಗಳನ್ನು ತೋರಿಸಿದೆ. ಅನುಬಂಧದಲ್ಲಿ ಅನ್ಯವ್ಯಾಕರಣಗಳಿಂದ ಅಪಭ್ರಂಶ ಪ್ರಕರಣದ ಭಾಗಗಳನ್ನೂ ಸೇರಿಸಿದೆ. ಗ್ರಂಥಭಾಗವು ನಾಮಪ್ರಕರಣದವರೆಗೆ ಮಾತ್ರ ಇರು ವಂತಿದೆ. ಈಚೆಗೆ 'ಕಾವ್ಯಾವಲೋಕನ'ದ ಪ್ರತ್ಯೇಕ ಪರಿಷ್ಕರಣಗಳು ಬೇರೆ ಬೇರೆ ಪ್ರತಿಗಳನ್ನೂ ಬಳಸಿ ಸಿದ್ಧವಾದುದರಿಂದ 'ಶಬ್ದಸ್ಮೃತಿ' ಭಾಗದ ಪಾಠದಲ್ಲಿಯೂ ವ್ಯತ್ಯಾಸಗಳಾಗಿರುವುದು ಕಾಣುತ್ತದೆ. ಇದನ್ನು ತುಲನೆಯಿಂದ ಗೊತ್ತುಮಾಡ ಬೇಕು.

ನಾಗವರ್ಮನ (೧೦೪೨) 'ಕರ್ಣಾಟಕ ಭಾಷಾಭೂಷಣ' ಮೊದಲು ಮೈಸೂರ ಸಿದ್ಧಾಂತಿ ಪುಸ್ತಕಂ ಅಳಸಿಂಗಲಾಚಾರಿಯವರಿಂದ "ವಿರಚಿಸಲ್ಪಟ್ಟು, ಕನ್ನಡ ಟೀಕು ಸಮೇತವಾಗಿ ಮೈಸೂರ್ ಜಗನ್ಮೋಹನ ಮುದ್ರಾಕ್ಷರ ಶಾಲೆಯಲ್ಲಿ ಶಾಲಾಧಿಕಾರಿಗಳಿಂದ ಮುದ್ರಿಸಲ್ಪಟ್ಟು" ೧೮೮೦ರಲ್ಲಿ (೫೬-೩-೧೮೮೦) ಪ್ರಕಟ ವಾಯಿತು. ಮುಖಪುಟದ ಹೊರತು ಹಸ್ತಪ್ರತಿಸಂಬಂಧದ ವಿವರಗಳಾವುವೂ ಇಲ್ಲ. ಹಳೆಯ ಮಾದರಿಯಲ್ಲಿ ಸಾಧಾರಣವಾಗಿ ಮುದ್ರಣವಾಗಿದ್ದು, ತಪ್ಪುಗಳು ಬಹಳ ವಾಗಿವೆ ; ಆಶಯದ ವೈಪರೀತ್ಯಗಳೂ ಇವೆ. ಟೀಕು ಈ ಪುಸ್ತಕದ 'ಸಂಪಾದಕರ'ದೇ ಇರಬೇಕು.

ಇದರ ಅನಂತರದಲ್ಲಿ ಬಿ. ಎಲ್. ರೈಸ್ ಸಂಪಾದಿಸಿ, ೧೮೮೪ರಲ್ಲಿ ಬೆಂಗ ಳೂರಿನಿಂದ ಇದನ್ನು ಪ್ರಕಟಿಸಿದ್ದಾರೆ. ಮೂರು ಓಲೆ ಪ್ರತಿಗಳ ಆಧಾರದಿಂದ ಸಿದ್ಧ ವಾಗಿದೆ ಇದು. 'ಪ್ರಥಮ' ಪ್ರತಿಯನ್ನು ಆಧಾರಪ್ರತಿಯಾಗಿಟ್ಟುಕೊಂಡು, ಉಳಿದ ವುಗಳಿಂದ ಪಾಠಾಂತರಗಳನ್ನು ವಿರಳವಾಗಿ ಗುರುತಿಸಿದೆ. ಜೈನಸಂಪ್ರದಾಯದ ಹಸ್ತಪ್ರತಿಗಳೆಂದು ಈ ಪ್ರತಿಗಳನ್ನು ತಾವು ಪುರಸ್ಕರಿಸಿರುವುದಾಗಿ ಪರೋಕ್ಷವಾಗಿ ತಿಳಿಸಿ, ಲಿಂಗಾಯಿತ ಮತ್ತು ಬ್ರಾಹ್ಮಣ ಸಂಪ್ರದಾಯದ ಪಾಠಭೇದಗಳನ್ನು ಅನು ಬಂಧದಲ್ಲಿ ಸವಿವರವಾಗಿ ತೋರಿಸಿದ್ದಾರೆ. ಈ ಸಂಪಾದಿತ ಗ್ರಂಥದಲ್ಲಿ ಸಮಗ್ರ ಗ್ರಂಥಪಾಠವನ್ನು ಸೂತ್ರ ವೃತ್ತಿ ಪ್ರಯೋಗಗಳ ಅನುಕ್ರಮದಲ್ಲಿ ರೋಮನ್ ಲಿಪಿ ಯಲ್ಲಿ ಕೊಟ್ಟು, ಇನ್ನೂ ಚಿಕ್ಕಗಾತ್ರದ ಅಕ್ಷರಗಳಲ್ಲೆ, ಚೌಕಕಂಸಗಳಲ್ಲಿ, ಇಂಗ್ಲಿಷಿ ನಲ್ಲಿ ಸೂತ್ರಾರ್ಥವನ್ನು ಸಂಕ್ಷೇಪವಾಗಿ ಬರೆದಿದೆ. ಬಳಿಕ ಮೊದಲನೆಯ ವಿಭಜನ ರೇಖೆಯ ತಳದಲ್ಲಿ ಕನ್ನಡ ಲಿಪಿಯಲ್ಲಿ ಸೂತ್ರವೃತ್ತಿ ಮತ್ತು ಪ್ರಯೋಗಗಳನ್ನು ಕೊಟ್ಟಿದೆ ; ಹೆಚ್ಚಿನದಾಗಿ ಅನ್ಯಕೃತವಾದ ಒಂದು ಹೊಸಗನ್ನಡ ತಾತ್ಪರ್ಯವನ್ನೂ ಕೂಡಿಸಿದೆ. ಅನಂತರದಲ್ಲಿ ಎರಡನೆಯ ವಿಭಜನರೇಖೆಯ ತಳದಲ್ಲಿ ಉಳಿದೆರಡು ಪ್ರತಿ ಗಳ ಪಾಠಾಂತರಗಳನ್ನೂ ಬೇರೆ ಉಪಯುಕ್ತ ಸೂಚನೆಗಳನ್ನೂ ಅಲ್ಲಲ್ಲಿ ತೋರಿಸಿದೆ. ಇದು ಅಳಸಿಂಗಳಾಚಾರಿಯವರ ಪರಿಷ್ಕರಣಕ್ಕಿಂತ ಉತ್ತಮವಾದದ್ದು. ಆದರೆ ಮುಂದೆ ಬಂದ ಆರ್. ನರಸಿಂಹಾಚಾರ್ಯರ ಪರಿಷ್ಕರಣದೊಂದಿಗೆ ಹೋಲಿಸಿದರೆ ಭಾಷೆ, ಶಬ್ದರೂಪ, ಪಾಠನಿಷ್ಕರ್ಷೆ ಮುಂತಾದವುಗಳಲ್ಲಿ ಅನೇಕ ವಿಧದ ದೋಷ ಗಳು ಕಂಡುಬರುತ್ತವೆ. 'ತಾತ್ಪರ್ಯ' ಕವಿಪಾಠವೆಂದೇ ಭ್ರಾಂತಿ ಹುಟ್ಟಿಸುವಂತೆ ಗ್ರಂಥ ಶರೀರದಲ್ಲಿ ಸೇರಿಹೋಗಿದೆ. ಇನ್ನು ಉಪೋದ್ಘಾತ ಭಾಗದಲ್ಲಿ ಆ ಕಾಲದ ಅಗತ್ಯಕ್ಕೆ ತಕ್ಕಂತೆ ಕವಿಕೃತಿ ವಿಚಾರದೊಂದಿಗೆ ಕನ್ನಡ ಭಾಷೆ ಸಾಹಿತ್ಯಗಳ ಪ್ರಬಂಧಗಳೂ ಸೇರಿವೆ. ಅನುಬಂಧದಲ್ಲಿ ಪಾಠಾಂತರಗಳ, ಉದಾಹರಣ ಶಬ್ದಗಳ ಸೂಚಿಗಳಿವೆ.

ಇದೇ ಗ್ರಂಥ ಮತ್ತೆ ೧೯೦೩ರಲ್ಲಿ, ಆರ್. ನರಸಿಂಹಾಚಾರ್ಯರಿಂದ ಸಂಪಾ ದಿತವಾಗಿ ಬೆಂಗಳೂರಿನಿಂದ ಪ್ರಕಟಗೊಂಡಿದೆ. ಇದು 'ಕಾವ್ಯಾವಲೋಕನ'ದೊಡ ಗೂಡಿ ಪ್ರಕಟಗೊಂಡಿರುವುದು ಒಂದು ವಿಶೇಷ. ಇದೇ ಕವಿಯ 'ಶಬ್ದಸ್ಮೃತಿ'

ಯೊಂದಿಗೆ ಇದನ್ನು ಇಟ್ಟು ಅಭ್ಯಾಸ ಮಾಡಲು ಇದರಿಂದ ಅನುಕೂಲವಾಗಿದೆ. ರೈಸ್ ಪರಿಷ್ಕರಣದಲ್ಲಿ ಕೊಟ್ಟ ಹಾಗೆ ಇಲ್ಲಿ ರೋಮನ್ ಲಿಪಿಯಲ್ಲಿ ಗ್ರಂಥಪಾಠ ವನ್ನು ಕೊಡದೆ, ಬರಿಯ ಕನ್ನಡ ಲಿಪಿಯ ಪಾಠವನ್ನು ಕೊಟ್ಟಿದೆ. ಈ ಪರಿಷ್ಕರಣಕ್ಕೆ ೨ ಬೇರೆ ಓಲೆ ಪ್ರತಿಗಳನ್ನೂ ಒಂದು ಅಸಮಗ್ರ ನಕಲನ್ನೂ ಬಳಸಿದೆ. ಹಿಂದಿನ ಪರಿಷ್ಕರಣದಲ್ಲಿದ್ದ ಹೊಸಗನ್ನಡ 'ತಾತ್ಪರ್ಯ'ವನ್ನು ಕೈಬಿಟ್ಟು, ಪ್ರಾಚೀನವಾದ 'ಟೀಕು' ವೊಂದನ್ನು ಪ್ರಾಚೀನವಾದ ೨ ಓಲೆಪ್ರತಿಗಳ ಆಧಾರದಿಂದ ಸಂಪಾದಿಸಿ ಕೊಟ್ಟಿದೆ. ಎರಡೂ ಸಂದರ್ಭಗಳಲ್ಲಿ, ಪ್ರತಿಗಳಿಗೆ ಸಂಕೇತಾಕ್ಷರಗಳನ್ನು ಸೂಚಿ ಸಿರದ ಕಾರಣ ತೋರಿಸಿರುವ ಪಾಠಾಂತರಗಳು ಯಾವ ಯಾವ ಪ್ರತಿಯದು ಎಂದು ತಿಳಿಯದೆ ಹೋಗಿದೆ. ಪಾಠಾಂತರಗಳನ್ನೇನೋ ಧಾರಾಳವಾಗಿ ತೋರಿಸಿದೆ. ಟೀಕಿನ ಭಾಗವನ್ನು ಈಗ ತೋರಿಸಿರುವಂತೆ ಗ್ರಂಥಶರೀರದಲ್ಲಿ ತೋರಿಸದೆ, ಪ್ರತ್ಯೇಕವಾದ ವಿಭಜನರೇಖೆಗಳ ನಡುವೆ ತೋರಿಸಿದ್ದರೆ, ಅದರ ಅನ್ಯಕರ್ತೃತ್ವ ಸ್ಪಷ್ಟವಾಗುತ್ತಿ ದ್ದಿತು. ಆದರೆ ಇದೇನೂ ಮುಖ್ಯವಲ್ಲ. ಈ ಪರಿಷ್ಕರಣ ಇದರ ಹಿಂದಿನ ಎರಡು ಪರಿಷ್ಕರಣಗಳಿಗಿಂತ ಭಾಷೆ, ಶಬ್ದರೂಪ, ಪಾಠವಿಚಾರಗಳಲ್ಲಿ ವಿವಿಧವಾದ ಲೋಪ ದೋಷಗಳಿಂದ ಮುಕ್ತವಾಗಿರುವುದು ಗಮನಿಸತಕ್ಕದ್ದಾಗಿದೆ. ಆಶಯದ ವೈಪರೀತ್ಯ ಗಳು ಸಹ ಕಂಡುಬರುವುದಿಲ್ಲ. ಗ್ರಂಥಾಂತ್ಯದಲ್ಲಿ ಗ್ರಂಥೋಪಯುಕ್ತವಾದ ಸೂತ್ರ ಗಳ ವರ್ಣಾನುಕ್ರಮಣಿ ಇತ್ಯಾದಿಗಳ ಪರಿಶಿಷ್ಟಗಳಿವೆ.

ಇದೇ ಪರಿಷ್ಕರಣ, ಮೈಸೂರಿನ ಶಾರದಾಮಂದಿರದ ಮೂಲಕ, ೧೯೭೫ರಲ್ಲಿ ಪ್ರತ್ಯೇಕವಾದ ಗ್ರಂಥವಾಗಿ ಪುನರ್ಮುದ್ರಣಗೊಂಡಿದೆ; ಅಲ್ಲಿಯ ಪರಿಶಿಷ್ಟಗಳೂ ಸೇರಿವೆ. ಉಪೋದ್ಘಾತ ಭಾಗದಲ್ಲಿ 'ಕನ್ನಡ ಸಾಹಿತ್ಯದಲ್ಲಿ ನಾಗವರ್ಮರು' ಎಂಬ ಪ್ರಬಂಧವನ್ನು ಹೆಚ್ಚಿಗೆ ಬರೆದು ಸೇರಿಸಿದೆ. ಆದರೆ 'ಭಾಷಾಭೂಷಣ'ದ ಮೇಲಿನ ಪೀಠಿಕಾಭಾಗವನ್ನು ನರಸಿಂಹಾಚಾರ್ಯರ 'ಕಾವ್ಯಾವಲೋಕನ' ದ ಇಂಗ್ಲಿಷ್ ಉಪೋದ್ಘಾತದಿಂದ ಪ್ರತ್ಯೇಕಿಸಿ ಇಲ್ಲಿ ಮುದ್ರಣ ಮಾಡಿಸಿದೆ.

ಮುಂದಿನ ಕೃತಿ 'ಶಬ್ದಮಣಿದರ್ಪಣ'. ಹಳಗನ್ನಡ ವ್ಯಾಕರಣ ಗ್ರಂಥಗಳ ಶ್ರೇಣಿಯಲ್ಲಿ ಪ್ರಥಮವಾಗಿ ಪರಿಷ್ಕೃತಗೊಂಡು ಪ್ರಕಟವಾದ ಗ್ರಂಥವೆಂದರೆ ಇದೇ. ಈವರೆಗೆ ಇದರ ೭ ಪರಿಷ್ಕರಣಗಳೂ ೧೬ ಮುದ್ರಣಗಳೂ ಹೊರಬಿದ್ದಿವೆ. ಹಳ ಗನ್ನಡ ಭಾಷೆಯ ಅಭ್ಯಾಸಿಗಳಿಗೆ ಅತ್ಯುಪಯುಕ್ತವಾದುದು ಈ ಗ್ರಂಥ. ಬಹಳ ಹಿಂದಿನಿಂದಲೂ ಈ ಗ್ರಂಥಕ್ಕೆ ಇರುವ ಪ್ರಸಿದ್ಧಿ ಪ್ರಚಾರಗಳು ಕಾರಣವಾಗಿ, ಹಲವು ಹಸ್ತಪ್ರತಿಗಳು ಕಾಲದಿಂದ ಕಾಲಕ್ಕೆ ಲಿಖಿತವಾಗುತ್ತ, ಹೀಗೆ ಲಿಖಿತವಾಗಿರುವುದ ರಿಂದ ಹಲವು ವಿಧದ ಪಾಠಸಮಸ್ಯೆಗಳು ತಲೆದೋರುತ್ತ, ವಿದ್ವಾಂಸರಿಗೆ ಈ ಗ್ರಂಥದ ಕವಿಪಾಠವನ್ನು ಗುರುತಿಸುವುದು ಒಂದು ದೊಡ್ಡ ಸವಾಲಾಗಿ ಪರಿಣಮಿಸಿದೆ. ಈ ವರೆಗೆ ಬಂದ ಕೆಲವು ಪರಿಷ್ಕರಣಗಳ ಸಾಮಾನ್ಯ ಪರಿಚಯವನ್ನಿಲ್ಲಿ ಮಾಡಿ ಕೊಳ್ಳಬಹುದು.

ಮೈಸೂರು ವಿದ್ಯಾ ಇಲಾಖೆಯ ನಿರ್ದೇಶಕರಾಗಿದ್ದ ಜೆ. ಗ್ಯಾರೆಟ್, ೧೮೬೮ರಲ್ಲಿ ಮೊದಲ ಬಾರಿಗೆ 'ಶಬ್ದಮಣಿದರ್ಪಣ'ವನ್ನು ಸಮಗ್ರವಾಗಿ ಸಂಪಾದಿಸಿ ಪ್ರಕಟಿಸಿದರು. ಬಳಸಿದ ಪ್ರತಿಗಳ ವಿವರ ತಿಳಿಯದು. ಸೂತ್ರ, ಟೀಕೆ, ವೃತ್ತಿ, ಪ್ರಯೋಗ—ಈ ಕ್ರಮದಲ್ಲಿ ಇದು ಮುದ್ರಿತವಾಗಿದೆ. ಕೃತಿಭಾಗವಾಗಿಯೇ ಮುದ್ರಿಸಿರುವ ಇಲ್ಲಿರುವ ಟೀಕೆ ನಿಟ್ಟೂರ ನಂಜಯ್ಯನ ಟೀಕೆಯನ್ನು ಬಲುಮಟ್ಟಿಗೆ ಹೋಲುತ್ತದೆ. ವೃತ್ತಿ ಪ್ರಯೋಗಗಳ ನಡುವೆ ವ್ಯತ್ಯಾಸಗಳಿವೆ. ಗ್ರಂಥಪಾಠದಲ್ಲಿ ತಪ್ಪುಗಳು ಬಹಳವಾಗಿವೆ. ಈ ಕೃತಿಯ ಮೊದಲ ಮುದ್ರಣವೆಂದು ಇದರ ಬಗೆಗೆ ಹೇಳಬೇಕಾಗಿದೆ.

ಎಫ್. ಕಿಟ್ಟೆಲ್ ಅವರು ಈ ಗ್ರಂಥದ ಮೊದಲ ಪರಿಷ್ಕೃತ ಮುದ್ರಣವನ್ನು ೧೮೭೨ರಲ್ಲಿ ಮಂಗಳೂರಿನಿಂದ ಪ್ರಕಟಿಸಿದರು. ಇಂಗ್ಲಿಷ್ ಮುನ್ನುಡಿಯಲ್ಲಿ ಹಸ್ತಪ್ರತಿಗಳು, ಪಾಠಸಮಸ್ಯೆಗಳು, ಗ್ರಂಥಕರ್ತನ ಚರಿತ್ರೆ ಇವನ್ನೆಲ್ಲ ವಿಸ್ತಾರವಾಗಿ ಕುರಿತಿದ್ದಾರೆ. ಸಂಪಾದನ ಕಾರ್ಯಕ್ಕೆ ೯ ಹಸ್ತಪ್ರತಿಗಳನ್ನು ಅವರು ಸಂಗ್ರಹಿಸಿದರು. ಅವರು ಇವನ್ನು ಬಳಸಿಕೊಂಡು, ಅನುಸರಿಸಿರುವ ಗ್ರಂಥಸಂಪಾದನ ವಿಧಾನವನ್ನು ನಾನು ಅನ್ಯತ್ರ ವಿವರವಾಗಿ ನಿರೂಪಿಸಿದ್ದೇನೆ. ('ಶಬ್ದಾರ್ಥವಿಹಾರ', ಮೈಸೂರು, ೧೯೭೯,-ಕಿಟ್ಟೆಲ್ ಮತ್ತು ರೈಸ್ ಅವರ ಗ್ರಂಥಸಂಪಾದನ ವಿಧಾನಗಳು). ಇಲ್ಲಿ ಸಂಗ್ರಹವಾಗಿ ಹೇಳಬಹುದಾದರೆ, ಒಂದು ಹಸ್ತಪ್ರತಿಯನ್ನು ಆಧಾರವಾಗಿಟ್ಟುಕೊಂಡು ಉಳಿದವುಗಳಿಂದ ಪಾಠಾಂತರಗಳನ್ನು ಸೂಚಿಸಿದ್ದಾರೆ. ಅವರು ತಮ್ಮ ಸಂಪಾದಿತ ಪ್ರತಿಯನ್ನು ಸಿದ್ಧಗೊಳಿಸಿರುವುದು ಹೀಗೆ : ಸೂತ್ರ ಅದರ ಎಡಮಗ್ಗುಲಿಗೆ ಇಂಗ್ಲಿಷಿನಲ್ಲಿ ಸ್ಥೂಲವಾದ ಸೂತ್ರಾರ್ಥ, ಸೂತ್ರದ ಕೆಳಗೆ ಕ್ರಮವಾಗಿ ಪದಚ್ಛೇದ, ಅನ್ವಯ, ಟೀಕು, ವೃತ್ತಿ ಮತ್ತು ಪ್ರಯೋಗಗಳು. ಕೆಲವು ಕಡೆಗಳಲ್ಲಿ, ಪ್ರಯೋಗಭಾಗದಲ್ಲಿ ಮೂಲಪಾಠದ ಜೊತೆಗೇ ಹೋಲಿಕೆಗೆ ಇತರತ್ರ ಬರುವ ಸೂತ್ರಗಳ ಮತ್ತು ಪ್ರತ್ಯಂತರಗಳಲ್ಲಿ ದೊರೆಯುವ ಪಾಠಭೇದಗಳ ಸೂಚನೆಗಳಿವೆ. ಅಡಿಟಿಪ್ಪಣಿಗಳಲ್ಲಿ ವ್ಯಾಕರಣ, ಛಂದಸ್ಸು ಮುಂತಾದುವುಗಳಿಗೆ ಸಂಬಂಧಿಸಿದ ವಿಶೇಷಾಂಶಗಳನ್ನು ಕೊಟ್ಟಿದೆ. ಗ್ರಂಥಾಂತ್ಯದಲ್ಲಿ ಪರಿಶಿಷ್ಟವಾಗಿ ೨ ಪ್ರತಿಗಳ ಪಾಠಾಂತರಗಳನ್ನು ಮಾತ್ರ ಪ್ರತ್ಯೇಕವಾಗಿಯೇ ತೋರಿಸಿದೆ.

ಈ ಪರಿಷ್ಕರಣದ ದೌರ್ಬಲ್ಯಗಳು ಅನೇಕ. ಆಧಾರಪ್ರತಿಯ ಆಯ್ಕೆ ಸರಿಯಾಗಿರುವಂತೆ ತೋರುವುದಿಲ್ಲ. ಗ್ರಂಥಪಾಠವನ್ನು ಕೊಡುವಾಗ ಲಿಪಿಕಾರ ಸ್ಖಾಲಿತ್ಯಗಳನ್ನು ಕೂಡ ತಿದ್ದದೆ ಬಿಟ್ಟಿರುವುದರಿಂದ, ಹಲವು ವಿಧದ ಗೊಂದಲಗಳಿಗೆ ಕಾರಣವಾಗಿದೆ.

ಕಿಟ್ಟೆಲ್ ಶ್ರಮದಿಂದ ದ್ವಿತೀಯ ಪರಿಷ್ಕರಣವನ್ನು ೧೮೯೭ರಲ್ಲಿ ಪ್ರಕಟಿಸಿದರು. ಇದು ನನ್ನ ಪರಿಶೀಲನೆಗೆ ಇನ್ನೂ ದೊರೆತಿಲ್ಲ. ತೃತೀಯ ಪರಿಷ್ಕರಣದ ಮುನ್ನುಡಿಯ ಭಾಗದಿಂದ ಹೇಳಬಹುದಾದ ಸಂಗತಿಗಳು ಇವು :

"ಈ ಪರಿಷ್ಕರಣದಲ್ಲಿ ತಿದ್ದುಪಡಿಗಳು ಮುಖ್ಯವಾಗಿ ಪ್ರಯೋಗಭಾಗಕ್ಕೆ ಸೇರಿದವಾಗಿವೆ. ಅವು ಭಾಗಶಃ ಪ್ರಥಮ ಪರಿಷ್ಕರಣದ ಪರಿಶಿಷ್ಟದಲ್ಲಿ ತೋರಿಸಿರುವ ಭಿನ್ನಪಾಠಗಳ, ಮುಖ್ಯವಾಗಿ ಮೂಡಬಿದರೆಯ ಒಂದು ಹಸ್ತಪ್ರತಿಯ, ಆಧಾರದ ಮೇಲೆ ಮಾಡಿದವಾಗಿವೆ. ಈ ಓಲೆ ಪ್ರತಿ ಎ. ಸಿ. ಬರ್ನಲ್ ಅವರ ಪ್ರಯತ್ನಗಳ ಫಲವಾಗಿ ೧೮೭೨ರಲ್ಲಿ ದೊರಕಿಸಿಕೊಂಡದ್ದು. ಇದು ಸಾಧಾರಣವಾಗಿ ಒಳ್ಳೆಯ ಪ್ರತಿ. ಇಷ್ಟಾಗಿಯೂ ಕೆಲವು ಪ್ರಯೋಗಗಳನ್ನು '(?)' ಎಂಬ ಪ್ರಶ್ನಚಿಹ್ನೆಯೊಂದಿಗೆ ತೋರಿಸಿದೆ."

ಮುಂದುವರಿದು ಕಿಟ್ಟೆಲ್ ಅವರು ಮೂಡಬಿದರೆಯ ಹಸ್ತಪ್ರತಿಯಲ್ಲಿ ಕಂಡು ಬರುವ ಟೀಕೆ ನಿಟ್ಟೂರ ನಂಜಯ್ಯನದಲ್ಲವೆಂದೂ ಮತ್ತೊಬ್ಬನದೆಂದೂ ಆದರೆ ಅವುಗಳ ನಡುವೆ ಮುಖ್ಯಾಂಶದಲ್ಲಿ ವ್ಯತ್ಯಾಸವಿಲ್ಲವೆಂದೂ ತಿಳಿಸಿದ್ದಾರೆ. ತೃತೀಯ ಪರಿಷ್ಕರಣದಲ್ಲಿಯೂ ನಿಟ್ಟೂರ ನಂಜಯ್ಯನ ಟೀಕೆಯನ್ನೇ ಮುಂದುವರಿಸಿರುವುದ ರಿಂದ, ಕಿಟ್ಟೆಲ್ ಆ ಮತ್ತೊಬ್ಬನ ಟೀಕೆಯನ್ನು ಅನುಸರಿಸಿಲ್ಲವೆನ್ನಬೇಕು. ಹೆಚ್ಚಿನ ಹಸ್ತಪ್ರತಿಯ ಸಹಾಯದಿಂದ ಪ್ರಯೋಗ ಭಾಗದಲ್ಲಿ ತಿದ್ದುಪಡಿಗಳನ್ನು ಮಾಡಿರ ಬೇಕೆಂದೂ ಊಹಿಸಬಹುದು.

ಕಿಟ್ಟೆಲ್ ಪರಿಷ್ಕರಣದ 'ಮೂರನೆಯ ಸುಧಾರಿಸಿದ ಆವೃತ್ತಿ', ೧೯೨೦ರಲ್ಲಿ ಮಂಗಳೂರಿಂದಲೇ ಹೊರಬಂದಿತು. ಇದನ್ನು ಪಂಜೆ ಮಂಗೇಶರಾಯರು 'ಪುನ ಸ್ಸಂಪಾದನೆ' ಮಾಡಿದ್ದಾರೆ. "ಕೇಶಿರಾಜನ ಸೂತ್ರಗಳಿಗೆ ಮೂಲವಾಗಿರುವ ನಾಗ ವರ್ಮನ ಪದ್ಯಗಳನ್ನೂ ಶ್ಲೋಕಗಳನ್ನೂ ಈ ಆವೃತ್ತಿಯಲ್ಲಿ ಕೊಟ್ಟಿರುತ್ತೇನೆ. ಸೂತ್ರಗಳನ್ನು ಉದಾಹರಿಸುವ ಪದ್ಯಭಾಗಗಳಿಗೆ ಒರಸೆಯಾಗಿ ಸಂಖ್ಯೆಯನ್ನು ಹಾಕಿರುತ್ತೇನೆ" ಎಂಬುದಾಗಿ ತಮ್ಮ ಕಾರ್ಯಭಾರವನ್ನು ಅವರು ಸೂಚಿಸಿದ್ದಾರೆ. ಆರಂಭದ ವಿವರವಾದ ವಿಷಯಾನುಕ್ರಮಣಿಕೆಯನ್ನೂ ಅವರೇ ಸೇರಿಸಿರಬಹುದು. ಗ್ರಂಥಾಭ್ಯಾಸಕ್ಕೆ ಸಹಾಯಕವಾದ ಪರಿಶಿಷ್ಟಗಳಾವುವೂ ಇಲ್ಲದಿರುವುದು ಈ ಪರಿಷ್ಕರಣದ ಒಂದು ಕೊರತೆ. ೧೯೬೫ರಲ್ಲಿ ಇದರ ಪುನರ್ಮುದ್ರಣ ಧಾರವಾಡ ದಿಂದ, ಶಂಭುಲಿಂಗಪ್ಪ ಶಿವರುದ್ರಪ್ಪ ಕುಲಕರಣಿ ಎಂಬವರ ವತಿಯಿಂದ ಆಗಿದೆ.

'ಶಬ್ದಮಣಿದರ್ಪಣ'ದ ಇನ್ನೊಂದು ಪರಿಷ್ಕರಣವನ್ನು ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತು ೧೯೨೦ರಲ್ಲಿ ಹೊರತಂದಿದೆ. ಸಂಪಾದಕತ್ವ ಸೂಚಿತವಾಗಿಲ್ಲ. "ಶಬ್ದಮಣಿದರ್ಪಣದ ಈ ನಮ್ಮ ಪ್ರತಿಯನ್ನು ಮೈಸೂರು ಓರಿಯಂಟಲ್ ಲೈಬ್ರೇರಿ ಯಲ್ಲಿರುವ ಮೂರು ಓಲೆಯ ಪ್ರತಿಗಳ ಆಧಾರದಿಂದಲೂ ಮಂಗಳೂರಿನಲ್ಲಿ ಅಚ್ಚಾ ಗಿರುವ ಎರಡು ಪುಸ್ತಕಗಳ ಸಹಾಯದಿಂದಲೂ ಮುದ್ರಿಸಲಾಗಿದೆ" ಎಂಬುದಾಗಿ ತಿಳಿಸಿದೆ. ಡಿ. ಎಲ್. ನರಸಿಂಹಾಚಾರ್ಯರು, "ಇಲ್ಲಿ ಅಚ್ಚಾಗಿರುವ ಪಾಠ ವೃತ್ತಿ ಪ್ರಯೋಗಗಳಲ್ಲಿ ಸ್ವಲ್ಪ ವ್ಯತ್ಯಾಸವಿದ್ದರೂ ಕಿಟ್ಟೆಲ್ ಅವರ ಮುದ್ರಣದ ಪಾಠ ವನ್ನು ಬಹುಮಟ್ಟಿಗೆ ಹೋಲುತ್ತದೆ" ಎಂಬುದಾಗಿ ಅಭಿಪ್ರಾಯಪಟ್ಟಿದ್ದಾರೆ.

ಈ ಪರಿಷ್ಕರಣದ ಪುನರ್ಮುದ್ರಣ ಅತ್ಯವಶ್ಯವಾಗಿ ಆಗಬೇಕಾಗಿದೆ. ಪರಿಷತ್ತಿನ ಮಂಡಲಿಯಿಂದ ಇದು ಸಿದ್ಧವಾಗಿರುವಂತೆ ತೋರುವುದರಿಂದ ಇದಕ್ಕೆ ಬೆಲೆಯುಂಟು.

೧೯೩೯ರಲ್ಲಿ, ಎ. ವೆಂಕಟರಾವ್ ಮತ್ತು ಎಚ್. ಶೇಷ ಅಯ್ಯಂಗಾರ್ ಇವರ ಉಭಯ ಸಂಪಾದಕತ್ವದಲ್ಲಿ, ಮದ್ರಾಸ್ ವಿಶ್ವವಿದ್ಯಾನಿಲಯ ಬೇರೊಂದು ಶಮದ.ದ ಪರಿಷ್ಕರಣವನ್ನು ಪ್ರಕಟಿಸಿತು. ಇದರಲ್ಲಿ ಕೇಶಿರಾಜನ ಸ್ವರಚಿತವಾದುದೆನ್ನಲಾದ ವೃತ್ತಿಗೆ ಬದಲಾಗಿ ಲಿಂಗಣಾರಾಧ್ಯನೆಂಬ ಈಚಿನ ಒಬ್ಬ ಪಂಡಿತನ 'ಸೂತ್ರಾನ್ವಯ ರತ್ನಮಾಲೆ' ಎಂಬ ವೃತ್ತಿಯನ್ನು ಕಾಣಬಹುದಾಗಿದೆ. ಸೌಕರ್ಯಕ್ಕಾಗಿ ಕೇಶಿರಾಜನ ವೃತ್ತಿಯನ್ನು ಪಾಠಭೇದವೆಂಬಂತೆ, ಅಡಿಟಿಪ್ಪಣಿಯ ಭಾಗದಲ್ಲಿ ಮುದ್ರಿಸಿದೆ. ಪ್ರತ್ಯೇಕವಾದೊಂದು ಖಾನೆಯಲ್ಲಿಯೇ ಲಿಂಗಣಾರಾಧ್ಯನ ವೃತ್ತಿಯನ್ನು ತೋರಿಸುವುದು ಸಾಧ್ಯವಿದ್ದಿದ್ದರೆ, ಅದರ ಅನ್ಯಕರ್ತೃಕತ್ವ ನಿರ್ದೇಶಿತವಾಗಬಹುದಿತ್ತು. ಆದರೆ ಈ ವೃತ್ತಿಕಾರ ಕೇಶಿರಾಜನು ಕೊಟ್ಟಿರುವ ಉದಾಹರಣೆಗಳಲ್ಲಿ ಕೆಲವನ್ನು ಮಾರ್ಪಡಿಸಿರುವನೆಂದೂ ಕೆಲವನ್ನು ಹೆಚ್ಚಾಗಿ ಕೊಟ್ಟಿರುವನೆಂದೂ ಕೆಲವನ್ನು ಬಿಟ್ಟಿರುವನೆಂದೂ ಸಂಪಾದಕರೇ ತಿಳಿಸಿರುವುದರಿಂದ, ಈ ಪರಿಷ್ಕರಣ ಸೂತ್ರಭಾಗವೊಂದು ಹೊರತಾಗಿ ವೃತ್ತಿ ಪ್ರಯೋಗಗಳ ಮಟ್ಟಿಗೆ ಮೂಲಗ್ರಂಥವನ್ನು ಪ್ರತಿಬಿಂಬಿಸುವುದು ಶಕ್ಯವಿಲ್ಲವಾಗಿದೆ. ಪ್ರಸ್ತುತ ಈ ಪರಿಷ್ಕರಣದ ಸಿದ್ಧತೆಯಲ್ಲಿ ಲಿಂಗಣಾರಾಧ್ಯವೃತ್ತಿಯನ್ನೊಳಗೊಂಡ ಓಲೆ ಪ್ರತಿ, ಆರಾ ಜೈನ ಪುಸ್ತಕಭಂಡಾರದ ಓಲೆ ಪ್ರತಿ, ಕಿಟ್ಟೆಲ್ ಪರಿಷ್ಕರಣದ ಮೂರನೆಯ ಆವೃತ್ತಿ ಮತ್ತು ಕನ್ನಡ ಸಾಹಿತ್ಯ ಪರಿಷತ್ತಿನ ಪರಿಷ್ಕರಣ ಇವನ್ನು ಸಂಪಾದಕರು ಬಳಸಿರುವಂತೆ ತಿಳಿಯುವುದು. ಆದರೆ ಪಾಠಾಂತರಗಳನ್ನು ಸೂಚಿಸುವಾಗ, ಅವು ಯಾವ ಮೂಲದ್ದೆಂದು ಸೂಕ್ತ ಸಂಕೇತಗಳೊಂದಿಗೆ ತೋರಿಸಿಲ್ಲದಿರುವುದು ಇಲ್ಲಿಯ ಒಂದು ಲೋಪ; ಅಲ್ಲದೆ ಈ ಭಾಗದಲ್ಲಿಯೇ ಕೇಶಿರಾಜನ ವೃತ್ತಿಯನ್ನೂ ಪಾಠಭೇದವೆಂಬಂತೆ ಸೇರಿಸಿ ಮುದ್ರಿಸಿರುವುದೂ ಸೂಕ್ತವಲ್ಲವೆನ್ನಬಹುದು.

ಈ ಪರಿಷ್ಕರಣಕ್ಕೆ ಎಚ್. ಚನ್ನಕೇಶವ ಅಯ್ಯಂಗಾರ್ಯರು ಸುದೀರ್ಘವಾದ 'ಅವತರಣಿಕೆ'ಯೊಂದನ್ನು ಬರೆದಿದ್ದಾರೆ. ಇದು ವಿದ್ಯಾರ್ಥಿಗಳಿಗೆ, ಅಭ್ಯಾಸಿಗಳಿಗೆ ಉಪಯುಕ್ತವಾದುದು. ಗ್ರಂಥಾಂತ್ಯದಲ್ಲಿ ಪದ್ಯಗಳ ಅಕಾರಾದ್ಯಾನುಕ್ರಮಣಿ ಮುಂತಾಗಿ ೯ ಉಪಯುಕ್ತ ಪರಿಶಿಷ್ಟಗಳಿವೆ. ಟೀಕೆಯಿಲ್ಲದೆಯೇ ಈ ಗ್ರಂಥದ ಗಾತ್ರ ಶಮದ.ದ ಉಳಿದೆಲ್ಲ ಪರಿಷ್ಕರಣಗಳ ಗಾತ್ರವನ್ನೂ ಮೀರಿಸಿರುವುದು ಗಮನಾರ್ಹವಾಗಿದೆ. ಈ ಪರಿಷ್ಕರಣದ ಪುನರ್ಮುದ್ರಣ ಈಚೆಗೆ ಮದರಾಸು ವಿಶ್ವವಿದ್ಯಾನಿಲಯದಿಂದಲೇ ೧೯೭೩ರಲ್ಲಿ ಆಗಿದೆ.

'ಶಬ್ದಮಣಿದರ್ಪಣ'ದ ಈ ಮೇಲಿನ ಪರಿಷ್ಕರಣಗಳ ಪಾಠಸ್ವರೂಪ ಇತ್ಯಾದಿಯಾದ ವಿಚಾರಗಳ ನಿರೂಪಣೆಗೆ ಡಿ.ಎಲ್. ನರಸಿಂಹಾಚಾರ್ಯರ ಶಮದ.ದ ಪರಿಷ್ಕರಣದ ಪ್ರಸ್ತಾವನೆಯ ಆದಿಭಾಗವನ್ನು ಪರಿಶೀಲಿಸಬಹುದು.

ಮೈಸೂರು ಶಾರದಾಮಂದಿರದ ಕನ್ನಡ ಕವಿಕಾವ್ಯಮಾಲೆಯ ೬೮ನೆಯ ಗ್ರಂಥವಾಗಿ, ೧೯೫೯ರಲ್ಲಿ ಶಬ್ದಮಣಿದರ್ಪಣದ ಹೊಸದೊಂದು ಪರಿಷ್ಕರಣ ಪ್ರಕಟವಾಯಿತು. ಇದರ ಸಂಪಾದಕರು ಡಿ.ಎಲ್. ನರಸಿಂಹಾಚಾರ್ಯರು. ಎರಡು ಓಲೆ ಪ್ರತಿಗಳ ಮತ್ತು ಎರಡು ಮುದ್ರಿತ ಪ್ರತಿಗಳ ಆಧಾರದ ಮೇಲೆ ಇದು ಸಿದ್ಧವಾಗಿದೆಯೆಂದು ತಿಳಿಯುವುದು. ಮುದ್ರಿತ ಪ್ರತಿಗಳಲ್ಲಿ ಒಂದು, ೧೯೨೦ರಲ್ಲಿ ಪ್ರಕಟವಾದ ಕಿಟ್ಟೆಲ್ ಪರಿಷ್ಕರಣ (ಇದೇ ಪ್ರತಿಯ ಪಾಠವನ್ನೂ ಕ್ರಮವನ್ನೂ ಆಧಾರವಾಗಿಟ್ಟುಕೊಂಡಿರುವುದಾಗಿ ಪ್ರಸ್ತಾವನೆಯಲ್ಲಿ ಸೂಚಿಸಲಾಗಿದೆ.) ಮತ್ತು ಇನ್ನೊಂದು, ೧೯೨೦ರಲ್ಲಿಯೇ ಕನ್ನಡ ಸಾಹಿತ್ಯ ಪರಿಷತ್ತಿನಿಂದ ಪ್ರಕಟವಾದ್ದು. ಕಿಟ್ಟೆಲ್ ಪರಿಷ್ಕರಣದ ತೃತೀಯ ಆವೃತ್ತಿಯನ್ನು ಆಧಾರವಾಗಿಟ್ಟುಕೊಂಡಿದ್ದರೂ ಉಳಿದ ಪ್ರತಿಗಳ ಬಲದಿಂದ ಉಚಿತವಾಗಿ, ತದ್ಭಿನ್ನವಾಗಿ, ಪಾಠನಿಷ್ಕರ್ಷೆಗೆ ಪ್ರಯತ್ನಿಸಿರುವುದೂ ಕಾಣುತ್ತದೆ. ಮುಖ್ಯ ಪಾಠವ್ಯತ್ಯಾಸಗಳನ್ನು ಅಡಿಟಿಪ್ಪಣಿಯಲ್ಲಿ ತೋರಿಸಿದೆ. ಇಲ್ಲಿಯೇ 'ಕ' ಓಲೆ ಪ್ರತಿಯ ಶಬ್ದಾರ್ಥಸೂಚಕ ಟಿಪ್ಪಣಿಯನ್ನೂ ಸೇರಿಸಿದೆ. ಹಿಂದಿನ ಪರಿಷ್ಕರಣಗಳಲ್ಲಿದ್ದ ನಿಟ್ಟೂರು ನಂಜಯ್ಯನ ಟೀಕು, ಕಿಟ್ಟೆಲ್ ಪರಿಷ್ಕರಣದ ಪದಚ್ಛೇದ ಅನ್ವಯಗಳನ್ನು ಬಿಟ್ಟಿದೆ. ಕೆಲವೆಡೆ ಪಾಠಸಂದೇಹಗಳನ್ನು ಪ್ರಶ್ನಚಿಹ್ನೆಯಿಂದಲೂ ಇನ್ನು ಕೆಲವೆಡೆ ಸಂಪಾದಕ ನಿಯೋಜಿತ ಪಾಠಗಳನ್ನು ಚೌಕಕಂಸಗಳಲ್ಲಿಯೂ ತೋರಿಸಿದೆ. ಕೊನೆಗೆ ಸೂತ್ರ ಮತ್ತು ಪ್ರಯೋಗಗಳಿಗೆ ಅಕಾರಾದಿಗಳಿವೆ.

ಈ ಗ್ರಂಥಕ್ಕೆ ಬರೆದಿರುವ ಪ್ರಸ್ತಾವನೆಯಲ್ಲಿ, ಸೂತ್ರ ವೃತ್ತಿ ಮತ್ತು ಪ್ರಯೋಗಗಳಿಗೆ ಸಂಬಂಧಿಸಿದ ಪಾಠಸಮಸ್ಯೆಗಳ ಪರಿಶೀಲನೆಯನ್ನೂ ಮೂಲಪಾಠ ನಿರ್ಣಯ, ಪ್ರಯೋಗಗಳ ಆಕರ, ಕೇಶಿರಾಜನ ವ್ಯಕ್ತಿತ್ವ ಇವನ್ನೂ ವಿವೇಚಿಸಿದೆ. ಪಾಠಸಮಸ್ಯೆಗಳ ವಿಷಯದಲ್ಲಿ ಅವರು ಮಾಡಿರುವ ವಿವೇಚನೆ, ಶಮದ.ದ ಸಂಪಾದನೆಯಲ್ಲಿ ಬರುವ ತೊಡಕುಗಳು ಯಾವ ರೀತಿಯವು ಎಂಬುದನ್ನು ನಿರೂಪಿಸುವುದರ ಜೊತೆಗೆ, ಆ ಗ್ರಂಥದ ಸರ್ವಪಾಠ ಭೇದಗಳ ಸವಿಮರ್ಶ ಪರಿಷ್ಕರಣವೊಂದರ ಅಗತ್ಯವನ್ನೂ ಸ್ಪಷ್ಟಪಡಿಸುತ್ತದೆ.

ಈ ಪರಿಷ್ಕರಣದ ೨ನೆಯ ಮತ್ತು ೩ನೆಯ ಮುದ್ರಣಗಳು ೧೯೬೪ ಮತ್ತು ೧೯೬೮ರಲ್ಲಿ ಕ್ರಮವಾಗಿ ಹೊರಬಂದಿವೆ. ೧೯೭೧ ಮತ್ತು ೧೯೭೩ರಲ್ಲಿ ೧೯೬೮ರ ಪರಿಷ್ಕರಣದ ಪುನರ್ಮುದ್ರಣಗಳಾಗಿವೆ. ಇವುಗಳಲ್ಲಿ ೧೯೬೪ರ ಮುದ್ರಣದಲ್ಲಿ ನಿಟ್ಟೂರ ನಂಜಯ್ಯನ ಟೀಕೆಯನ್ನು ಸೇರಿಸಿದೆ. ಹೊಸದಾಗಿ ದೊರೆತ ಒಂದು ಓಲೆಪ್ರತಿಯಿಂದ ಒಂದೆರಡು ಕಡೆ ಪಾಠಭೇದಗಳನ್ನು ಕಾಣಿಸಿದೆ. ಇಷ್ಟು ಹೊರತು ಹೆಚ್ಚು ವ್ಯತ್ಯಾಸವೇನನ್ನೂ ಮಾಡಿಲ್ಲ. ಟೀಕೆಯನ್ನು ಸೇರಿಸಿದ್ದರಿಂದ ಓದುಗರಿಗೆ ಅನುಕೂಲವಾದರೂ ಸ್ವೀಕೃತವಾದ ಸೂತ್ರಪಾಠಗಳಿಗೂ ಟೀಕೆಯಲ್ಲಿರುವ ಪಾಠಗಳಿಗೂ ಅಲ್ಪವಾಗಿ ವ್ಯತ್ಯಾಸಗಳು ಕೆಲವೆಡೆ ಅನಿವಾರ್ಯವಾಗಿದೆಯೆಂದು ಈ

ಸಂಪಾದಕರು ಗಮನಿಸಿ, ಈ ಭಿನ್ನ ಪಾಠಗಳು ತೀರ ಅಮುಖ್ಯವೆಂಬ ಕಾರಣದಿಂದ, ಇಂಥ ಸಂದರ್ಭಗಳಲ್ಲಿ ಟೀಕೆಯಂತೆ ಸೂತ್ರಪಾಠಗಳನ್ನು ತಿದ್ದಲಾಗಲಿ, ಸೂತ್ರಪಾಠಗಳಂತೆ ಟೀಕೆಯನ್ನು ತಿದ್ದಲಾಗಲಿ ಹೋಗಿಲ್ಲವೆಂದು ಅವರು ತಿಳಿಸಿದ್ದಾರೆ. ಈ ವ್ಯತ್ಯಾಸಗಳು ವೃತ್ತಿ ಟೀಕೆಗಳ ಸಂಬಂಧದಲ್ಲಿಯೂ ಕಂಡುಬರಬಹುದು ಎಂದು ತೋರುತ್ತದೆ. ೧೯೬೪ರ ಮುದ್ರಣದಲ್ಲಿಯಾದರೋ, "ಸೂತ್ರಪಾಠಗಳಿಗೆ ಅನುಸಾರವಾಗಿ ಟೀಕಾಪಾಠಗಳನ್ನು ತಿದ್ದಿ, ಆ ತಿದ್ದುಗಳನ್ನು ಟೀಕಿನ ಮೈಯಲ್ಲೋ ಅಡಿಟಿಪ್ಪಣಿಯಲ್ಲೋ ಚೌಕಕಂಸಗಳಲ್ಲಿ ಸೂಚಿಸಿದೆ. ಇದರ ಜವಾಬುದಾರಿ ಪೂರ್ಣವಾಗಿ ಪ್ರಕೃತ ಸಂಪಾದಕನದು ; ಟೀಕಾಕಾರನಾದ ನಿಟ್ಟೂರ ನಂಜಯ್ಯನದಲ್ಲ...." ಎಂದು ಮುಂತಾಗಿ ಬರೆದಿದ್ದಾರೆ. ಅಲ್ಲದೆ, ೧೯೬೪ರ ಪರಿಷ್ಕರಣದ ವಿಮರ್ಶೆಯಾಗಿ ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದ ಪತ್ರಿಕೆಯಲ್ಲಿ ಎಂ.ಎಂ. ಕಲಬುರ್ಗಿ ಅವರು ಬರೆದ ಲೇಖನವನ್ನೂ ಪ್ರತಿವಿಮರ್ಶೆಯಾಗಿ ಬೆಂಗಳೂರಿನ ಕನ್ನಡ ನುಡಿ ಪತ್ರಿಕೆಯಲ್ಲಿ ಹಂಪ. ನಾಗರಾಜಯ್ಯನವರು ಬರೆದ ಲೇಖನವನ್ನೂ ಗಮನಿಸಿ, ಎರಡರಿಂದಲೂ ಸೂಕ್ತವಾದ ತಿದ್ದುಪಡಿಗಳನ್ನು ಅಂಗೀಕರಿಸಿರುವುದಾಗಿ ತಿಳಿಸಿದ್ದಾರೆ. ಇದು ನಿಜವಾದರೂ ಇನ್ನೂ ಕೆಲವು ಪಾಠ ಸಮಸ್ಯೆಗಳೋ ದೋಷಗಳೋ ಹಾಗೆಯೇ ಉಳಿದಿರುವುದುಂಟು (ಉದಾ : ಸೂತ್ರ ೫೦ ; ೯೭ರ ಪ್ರಯೋಗ ೧೫ ; ಸೂತ್ರ ೧೫೬; ಪ್ರಯೋಗ ೧ ಇತ್ಯಾದಿ). ಇನ್ನು ವೃತ್ತಿ ಟೀಕೆಗಳ ಆಶಯದ ಪರಸ್ಪರ ಸಾದೃಶ್ಯ ವೈದೃಶ್ಯಗಳ ಬಗೆಗೆ ಉತ್ಪನ್ನವಾಗಬಹುದಾದ ಸಮಸ್ಯೆಗಳನ್ನು ಕುರಿತು ಏಕೆ ಏನನ್ನೂ ಹೇಳಲಿಲ್ಲವೋ ತಿಳಿಯದಾಗಿದೆ.

ಈಚೆಗೆ ತ. ಸು. ಶಾಮರಾಯರು ಮತ್ತು ಎಚ್. ನಂಜೇಗೌಡ ಅವರು ಉಭಯ ಸಂಪಾದಕತ್ವದಲ್ಲಿ ೧೯೭೫ರಲ್ಲಿ ಶಮದ.ದ ಇನ್ನೊಂದು ಪರಿಷ್ಕರಣವನ್ನು ಹೊರತಂದಿದ್ದಾರೆ. ಇದನ್ನು ಮೈಸೂರಿನ ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ ಪ್ರಕಟಿಸಿದೆ. ನಿಟ್ಟೂರ ನಂಜಯ್ಯನ ಟೀಕೆಯನ್ನು ಕೈಬಿಟ್ಟು ಹೊಸಗನ್ನಡದಲ್ಲಿ ತಾತ್ಪರ್ಯವನ್ನೂ ವಿಶೇಷ ವಿಷಯವನ್ನೂ ಸೇರಿಸಿರುವುದು ಕಾಣುತ್ತದೆ. ತಾತ್ಪರ್ಯವನ್ನು ವೃತ್ತಿಯ ಬಳಿಕವೂ ವಿಶೇಷಾಂಶಗಳನ್ನು ವಿಚಾರವೆಂಬ ಹೆಸರಿನಲ್ಲಿ ಪ್ರಯೋಗಭಾಗದ ಬಳಿಕವೂ ಸೇರಿಸಿದೆ. ಸಣ್ಣಕ್ಷರಗಳಲ್ಲಿ ಗ್ರಂಥಶರೀರದಲ್ಲಿಯೇ ಇವನ್ನು ಮುದ್ರಿಸಿದೆ. ಮೊದಲು ಗ್ರಂಥಪಾಠವನ್ನು ಮುದ್ರಿಸಿ, ಪ್ರತ್ಯೇಕ ಖಾನೆಗಳಲ್ಲಿ ಇವನ್ನು ಮುದ್ರಿಸಬಹುದಾಗಿದ್ದಿತು. ಈ ಪರಿಷ್ಕರಣದ ಸಿದ್ಧತೆಗೆ ಬಳಸಿದ ಯಾವ ಹಸ್ತಪ್ರತಿಗಳ ವಿವರಗಳೂ ತಿಳಿದಿಲ್ಲ. ಆದರೆ ಪರಿಶೀಲಿಸಿದರೆ, ಡಿ.ಎಲ್. ನರಸಿಂಹಾಚಾರ್ಯರ ಪರಿಷ್ಕರಣದ ಮೂರನೆಯ ಮುದ್ರಣವನ್ನು (೧೯೬೪ರ) ಸೂತ್ರ, ವೃತ್ತಿ ಮತ್ತು ಪ್ರಯೋಗಗಳ ಪಾಠಕ್ಕೆ ಪ್ರಾಯಃ ಅನುಸರಿಸಿರುವಂತೆ ತೋರುವುದು ; ಪಾಠಭೇದ.ಗಳೇನನ್ನೂ ತೋರಿಸಿಲ್ಲ. ಗ್ರಂಥಾರಂಭದಲ್ಲಿ ಕವಿ ಕೃತಿ ವಿಚಾರದ ಒಂದು ಚಿಕ್ಕ ಉಪೋದ್ಘಾತವಿದೆ.

೧೯೭೭ರಲ್ಲಿ ಭುವನಹಳ್ಳಿ ಡಿ. ಪದ್ಮನಾಭ ಶರ್ಮರು 'ಶಬ್ದಮಣಿದರ್ಪಣ'ದ ತಮ್ಮ ಪರಿಷ್ಕರಣದಲ್ಲಿ, ಸೂತ್ರ ವೃತ್ತಿ ಪ್ರಯೋಗಗಳ ಜೊತೆಗೆ 'ನಲ್ನುಡಿಗನ್ನಡಿ' ಎಂಬ ವಿಸ್ತಾರವಾದ ವ್ಯಾಖ್ಯಾನವೊಂದನ್ನು ಸ್ವತಃ ಬರೆದು ಸೇರಿಸಿದ್ದಾರೆ. ವಿಸ್ತಾರವಾದ ಉಪೋದ್ಘಾತವೂ ಇದೆ. ಪ್ರತಿಯೊಂದು ಸೂತ್ರದ ಛೇದ, ಅನ್ವಯ, ಟೀಕೆ, ವೃತ್ತಿ, ಪ್ರಯೋಗ, ಅರ್ಥ, ಉದಾಹರಣೆ, ಕಠಿನ ಶಬ್ದಾರ್ಥ ಎಂಬ ಅನುಕ್ರಮದಲ್ಲಿ ಅಭಿಪ್ರಾಯವಿಶದತೆಗೆ ಸಲಕರಣೆಗಳನ್ನು ಒದಗಿಸಲಾಗಿದೆ. ಆಗಾಗ ವಿಶೇಷ ವಿವರಣೆಗಳನ್ನು ಬರೆಯಲಾಗಿದೆ. ಸಂದರ್ಭದ ಅಗತ್ಯವನ್ನು ಹಿಡಿದು ಪ್ರಾಚೀನ ಸಂಸ್ಕೃತ ಕನ್ನಡ ವ್ಯಾಕರಣ ಗ್ರಂಥಗಳಿಂದ ಸಂವಾದಿಯಾದ ಭಾಗಗಳನ್ನು ಎತ್ತಿಕೊಟ್ಟಿದೆ. ಗ್ರಂಥಾಂತ್ಯದಲ್ಲಿ ಶಮದ.ದ ಸೂತ್ರಪಾಠ, ವ್ಯಾಖ್ಯಾನ ಭಾಗದಲ್ಲಿ ಉದ್ಧೃತವಾದ ಅನ್ಯವ್ಯಾಕರಣ ಗ್ರಂಥಗಳ ಸಂವಾದಿ ಸೂತ್ರಗಳು, ಪ್ರಯೋಗಗಳ ಆಕರಗಳು ಇತ್ಯಾದಿಗಳಿಗೆ ಸಂಬಂಧಪಟ್ಟ ಕೆಲವು ಪರಿಶಿಷ್ಟಗಳು ಸಮಾವೇಶಗೊಂಡಿವೆ.

ಯಾವ ಹಸ್ತಪ್ರತಿ ಅಥವಾ ಮುದ್ರಿತ ಪ್ರತಿಯ ಆಧಾರದ ಮೇಲೆ ಇಲ್ಲಿಯ ಸೂತ್ರ ವೃತ್ತಿ ಪ್ರಯೋಗಗಳ ಗ್ರಂಥಪಾಠಗಳು ಸಿದ್ಧವಾಗಿವೆಯೆಂಬುದು ಕೂಡಲೇ ತಿಳಿಯುವುದಿಲ್ಲ. ಗ್ರಂಥವೇನೋ ದೊಡ್ಡದಾಗಿದೆ; ಆದರೆ ಆಶಯದ ವೈಪರೀತ್ಯಗಳಿಂದ ಹಿಡಿದು ಅಚ್ಚಿನ ತಪ್ಪುಗಳವರೆಗೆ ಹಲವು ವಿಧದ ತಪ್ಪುಗಳೂ ಇವೆ. ವ್ಯಾಕರಣ ಗ್ರಂಥದಲ್ಲಿ ಇಷ್ಟು ಧಾರಾಳವಾಗಿ ತಪ್ಪುಗಳಿರುವುದಕ್ಕೆ ವಿಷಾದಿಸಬೇಕಾಗಿದೆ; ಕನ್ನಡಿಗರಾದ ನಾವು ನಮ್ಮ ಪಾಂಡಿತ್ಯದ ಬೆಳವಣಿಗೆಯ ಬಗ್ಗೆ ಮತ್ತೆ ಮತ್ತೆ ಆತ್ಮಪರೀಕ್ಷೆ ಮಾಡಿಕೊಳ್ಳಬೇಕಾಗಿದೆ.

ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆ ೧೯೭೭ರಲ್ಲಿ 'ಶಬ್ದಮಣಿದರ್ಪಣ'ದ ಒಂದು ಪರಿಷ್ಕರಣವನ್ನು ಹೊರತಂದಿದೆ. ಇದರ ಸಂಪಾದಕರು ಡಿ.ಕೆ. ಭೀಮಸೇನರಾಯರು. ಈ ಪರಿಷ್ಕರಣ ಹೈದರಾಬಾದಿನ ಉಸ್ಮಾನಿಯ ವಿಶ್ವವಿದ್ಯಾನಿಲಯದ ಹಸ್ತಪ್ರತಿಗಳ ಸಂಗ್ರಹದಲ್ಲಿದ್ದ ಓಲೆಪ್ರತಿಯೊಂದರ ಆಧಾರದ ಮೇಲೆ ಸಿದ್ಧವಾಗಿದೆ. ೧೯೪೩ರ ವೇಳೆಗೆ ಪ್ರಕಟವಾಗಿದ್ದ ನಾಲ್ಕು ಮುದ್ರಿತ ಪ್ರತಿಗಳಿಂದ ಪಾಠಭೇದಗಳನ್ನು ಸೂಚಿಸಿದೆ. ಜೊತೆಗೆ 'ಕಾವ್ಯಾವಲೋಕನ'ದಿಂದಲೂ ಪಾಠಭೇದಗಳನ್ನು ಗುರುತಿಸಿದೆ. ಈ ಪರಿಷ್ಕರಣಕ್ಕೆ ಮೇಲೆ ಸೂಚಿಸಿದ ಓಲೆ ಪ್ರತಿಯ ಪಾಠವೇ ಬಹುಮಟ್ಟಿಗೆ ಆಧಾರವಾಗಿದ್ದು, ಸೂತ್ರ, ವೃತ್ತಿ ಪ್ರಯೋಗ ಪಾಠಗಳು ಇಲ್ಲಿ ಇತರ ಪರಿಷ್ಕರಣಗಳ ಸೂತ್ರ, ವೃತ್ತಿ, ಪ್ರಯೋಗಗಳ ಪಾಠಗಳಿಗಿಂತ ಅನೇಕ ಕಡೆಗಳಲ್ಲಿ ಬೇರೆಯಾಗಿರುವುದರಿಂದ, ಒಂದು ರೀತಿಯಲ್ಲಿ ಈ ಪರಿಷ್ಕರಣ ಲಿಂಗಣಾರಾಧ್ಯನ ವೃತ್ತಿ ಪ್ರಯೋಗ ಸಹಿತವಾದ ಮದ್ರಾಸು ಪರಿಷ್ಕರಣದಂತೆ ವಿಶಿಷ್ಟವಾದುದಾಗಿದೆ. ಆದರೆ ಕವಿಪಾಠ ಇಲ್ಲಿಯೇ ಸುರಕ್ಷಿತವಾಗಿದೆಯೆಂದೂ ಇದೇ ನಿಜವಾಗಿ ಕವಿಪಾಠವೆಂದೂ ನಂಬುವುದು ಹೇಗೆ? ವ್ಯತ್ಯಾಸವಿರುವ ಅನೇಕ

ಕಡೆಗಳಲ್ಲಿ, ಈ ಪರಿಷ್ಕರಣಕ್ಕೆ ಆಧಾರವಾದ ಓಲೆಪ್ರತಿಯೊಂದರಲ್ಲಿಯೇ ವ್ಯತ್ಯಾಸಗಳಿರುವುದರಿಂದ, ಎಚ್ಚರಿಕೆಯಿಂದ ಈ ಪ್ರತಿಯ ಪಾಠಪ್ರಾಮಾಣ್ಯವನ್ನು ಪರೀಕ್ಷಿಸಬೇಕಾಗುತ್ತದೆ. ಭಾಷೆ, ಶೈಲಿ, ಛಂದಸ್ಸು, ಆಶಯಗಳ ದೃಷ್ಟಿಯಿಂದ ತೃಪ್ತಿಕರವಾಗಿ ತೋರದ ಇಲ್ಲಿಯ ಪ್ರತ್ಯೇಕಪಾಠಗಳನ್ನು ಹಲವೆಡೆಗಳಲ್ಲಿ ಗಮನಿಸಿದಾಗ ಈ ಪ್ರತಿಯ ಪಾಠಪ್ರಾಮಾಣ್ಯದ ವಿಚಾರದಲ್ಲಿ ನಮ್ಮ ಸಂದೇಹ ಹೆಚ್ಚುತ್ತದೆ. ಜೊತೆಗೆ ಇಲ್ಲಿಯ ಪೂರ್ಣಗೊಂಡ ಪದ್ಯರೂಪದ ಪ್ರಯೋಗಗಳೂ ಅಧಿಕ ಪ್ರಯೋಗಗಳೂ ಕೇಶಿರಾಜಕೃತವೋ ಅಥವಾ ಅನ್ಯಕೃತವೋ ಇದು ಇನ್ನೊಂದು ಪಾಠಸಮಸ್ಯೆ. ಕೆಲವು ಪ್ರಯೋಗಗಳು ಕೃತಕವಾಗಿಯೂ ತೋರುತ್ತವೆ. ವೃತ್ತಿ ಕೆಲವೆಡೆ ತೀರ ಭಿನ್ನವಾಗಿರುವುದಕ್ಕೆ ಕಾರಣವೇನು ? ಇದು ಮತ್ತೊಂದು ಪಾಠಸಮಸ್ಯೆ. ಕೆಲವು ಅಧಿಕಸೂತ್ರಗಳೂ ಪ್ರಚಲಿತಸೂತ್ರಗಳಲ್ಲಿಯೇ ಪಾಠಭೇದಗಳೂ ಹೇಗೆ ಬಂದುವು ? ಇದು ಬೇರೊಂದು ಸಮಸ್ಯೆ. ಹೀಗೆ ಹಲವು ಸಮಸ್ಯೆಗಳ ಹುತ್ತವಾಗಿದೆ ಈ ಪರಿಷ್ಕರಣ. ಇವನ್ನೆಲ್ಲ ತಾಳ್ಮೆಯಿಂದ ಸೋಸಿ ನೋಡಬೇಕು; ಬೇರೆ ಓಲೆಪ್ರತಿಗಳೊಂದಿಗೆ ಈ ಪರಿಷ್ಕರಣಕ್ಕೆ ಮೂಲವಾದ ಓಲೆಪ್ರತಿಯನ್ನು ತೂಗಿ ತುಲನೆಮಾಡಿ ನೋಡಬೇಕು.

ಪ್ರಸ್ತುತ ಪರಿಷ್ಕರಣದಲ್ಲಿ, ಆರಂಭಕ್ಕೆ ಪಾಠಸಮಸ್ಯೆಗಳು ಪಾಠಭೇದಗಳು ಮುಂತಾದುವನ್ನು ಕುರಿತ ವಿಸ್ತಾರವಾದ ಒಂದು ಪೀಠಿಕೆಯಿದೆ. ಮುಖ್ಯವಾಗಿ ಇಲ್ಲಿ ಶಮದ.ದ ಪ್ರಸ್ತುತ ಪರಿಷ್ಕರಣಕ್ಕೆ ಮೂಲವಾದ ಹಸ್ತಪ್ರತಿಯ ವೈಶಿಷ್ಟ್ಯವನ್ನು ತುಲನಾತ್ಮಕವಾಗಿ ಕುರಿತಿದೆ. ಕೊನೆಯಲ್ಲಿ ಟಿಪ್ಪಣಿಗಳು ಮತ್ತು ಸೂತ್ರ ಪ್ರಯೋಗಗಳ ಅಕಾರಾದಿ ಅನುಕ್ರಮಣಿಕೆಗಳು ಬಂದಿವೆ.

ಕೊನೆಯದಾಗಿ ಗಮನಿಸಬೇಕಾದ ಗ್ರಂಥ ಎಂದರೆ ಭಟ್ಟಾಕಳಂಕನ 'ಕರ್ಣಾಟಕ ಶಬ್ದಾನುಶಾಸನ' (೧೬೦೪). 'ಭಾಷಾಭೂಷಣ'ದ ಪ್ರಕಟನೆಯ ತರುವಾಯದಲ್ಲಿ ಬಿ. ಎಲ್. ರೈಸ್ ಅವರೇ ಭಟ್ಟಾಕಳಂಕನ 'ಕರ್ಣಾಟಕ ಶಬ್ದಾನುಶಾಸನ'ವನ್ನು, ಆ ಗ್ರಂಥದ ವೃತ್ತಿ ವ್ಯಾಖ್ಯೆಗಳೊಂದಿಗೆ ಮೊದಲಬಾರಿಗೆ, ೧೮೯೦ರಲ್ಲಿ ಬೆಂಗಳೂರಿನಿಂದ ಪ್ರಕಟಿಸಿದರು. ಈ ಗ್ರಂಥದ ಪರಿಷ್ಕರಣಕ್ಕೆ ಸು. ೨೦ ವರ್ಷಗಳ ಮುಂಚಿನಿಂದಲೂ ಹಸ್ತಪ್ರತಿಗಳನ್ನು ಶೇಖರಿಸತೊಡಗಿದ್ದುದಾಗಿಯೂ ಸಂಪಾದನ ಕಾರ್ಯ ಮುಗಿದಮೇಲೆಯೂ ಅಚ್ಚಿನ ಕಾರ್ಯವೇ ಹಲವು ವರ್ಷಗಳು ಹಿಡಿದುದಾಗಿಯೂ ರೈಸ್ ಮುನ್ನುಡಿಯಲ್ಲಿ ತಿಳಿಸಿದ್ದಾರೆ.

ಈ ಗ್ರಂಥದ ಸಂಪಾದನೆಗೆ ಯಾವ ವಿಧಾನಗಳನ್ನು ಅನುಸರಿಸಲಾಯಿತೆಂಬುದು ತಿಳಿದಿಲ್ಲ. ಅವರ ಸೂಚನೆಗಳಿಂದ, ದೇಶೀಯ ಪಂಡಿತರಿಂದಲೂ ಕಿಟ್ಟೆಲ್ ಅವರಿಂದಲೂ ಅವರು ಕನಿಷ್ಠ ನಾಲ್ಕು ಹಸ್ತಪ್ರತಿಗಳನ್ನಾದರೂ ದೊರಕಿಸಿಕೊಂಡು ಕೆಲಸವನ್ನಾರಂಭಿಸಿದಂತೆ ತೋರುತ್ತದೆ. ಸಂಪಾದನಕಾರ್ಯದಲ್ಲಿ ಅವರಿಗೆ, ತಮ್ಮ ಕಛೇರಿಯ ಮತ್ತು ಹೊರಗಿನ ದೇಶೀಯ ಪಂಡಿತರು ಸಹಾಯವಾಗಿದ್ದರೆಂದು ತಿಳಿಯುವುದು.

'ಶಬ್ದಾನುಶಾಸನ'ದ ಪ್ರಸ್ತುತ ಪರಿಷ್ಕರಣದ ರೂಪರೇಷೆಗಳು ಈ ರೀತಿಯಾಗಿವೆ: (i) ರೋಮನ್ ಲಿಪ್ಯಂತರದಲ್ಲಿ ಸೂತ್ರ ವೃತ್ತಿ ಪ್ರಯೋಗ ಮತ್ತು ವ್ಯಾಖ್ಯೆಗಳನ್ನು ಕ್ರಮವಾಗಿ ಕೊಟ್ಟಿದೆ. ಪ್ರಯೋಗ ವ್ಯಾಖ್ಯೆಗಳ ನಡುವೆ ಸೂತ್ರಾರ್ಥವನ್ನು ಇಂಗ್ಲಿಷಿನಲ್ಲಿ ಸಂಕ್ಷೇಪವಾಗಿ ಸೂಚಿಸಿದೆ. ವ್ಯಾಖ್ಯಾನದಲ್ಲಿ, ವ್ಯಾಖ್ಯಾನಕಾರನು ವಿಷಯದ ಪುಷ್ಟೀಕರಣಕ್ಕಾಗಿ ಸ್ವತಃ ಉದ್ಧರಿಸಿರುವ ಗ್ರಂಥದ ಬೇರೆ ಬೇರೆ ಕಡೆಗಳ ಸೂತ್ರಗಳ ನಿರ್ದೇಶನಕ್ಕಾಗಿ, ಅಲ್ಲಲ್ಲೇ ಆಯಾ ಸೂತ್ರ ಸಂಖ್ಯೆಯನ್ನು ಅನುಕೂಲಕ್ಕೆಂದು ಸೂಚಿಸಿದೆ. ಇಷ್ಟರ ಹೊರತು ಪ್ರತ್ಯಂತರಗಳ ಪಾಠಭೇದಗಳನ್ನು ಎಲ್ಲಿಯೂ ಸೂಚಿಸಿಲ್ಲ. (ii) ಅನಂತರದಲ್ಲಿ, ಕನ್ನಡ ಲಿಪಿಯಲ್ಲಿ ಸೂತ್ರ ವೃತ್ತಿ ಪ್ರಯೋಗ ಮತ್ತು ವ್ಯಾಖ್ಯೆಗಳನ್ನು ಕ್ರಮವಾಗಿ ಕೊಟ್ಟಿದೆ. ಪ್ರಯೋಗ, ವ್ಯಾಖ್ಯೆಗಳ ನಡುವೆ ಇಲ್ಲಿ ಸೂತ್ರಾರ್ಥದ ಇಂಗ್ಲಿಷ್ ಟಿಪ್ಪಣಿಯಿಲ್ಲ. ಇದು ಹೊರತು ಉಳಿದಂತೆ ರೋಮನ್ ಲಿಪ್ಯಂತರದಲ್ಲಿ ಹೇಗೆಯೋ ಹಾಗೆಯೇ ಇಲ್ಲಿಯೂ ಕ್ರಮಾನುಸರಣೆಯಿದೆ.

'ಶಬ್ದಾನುಶಾಸನ'ದ ಸಂಪಾದನೆಯ ಪಾಠಮೌಲ್ಯ ರೈಸ್ ಅವರೇ ಸಂಪಾದಿಸಿದ 'ಭಾಷಾಭೂಷಣ'ದ ಪಾಠಮೌಲ್ಯಕ್ಕಿಂತ ಉತ್ತಮವಾದುದು. ಆದರೆ ಆರ್. ನರಸಿಂಹಾಚಾರ್ಯರ ಪರಿಷ್ಕರಣವೇ ಇಲ್ಲಿಯೂ ಹೆಚ್ಚು ನಿರ್ದುಷ್ಟವಾದ್ದು. ಈ ಕೃತಿಯು ಸಂಪಾದನೆಯಲ್ಲಿ ಶಾಸನಗಳ ಸಂಪಾದನೆಯಲ್ಲಿ ಅನುಸರಿಸುವ ಕೆಲವು ಕ್ರಮಗಳನ್ನು ಅನುಸರಿಸಿರುವುದರಿಂದ ಅಭ್ಯಾಸಿಗಳಿಗೆ ಸೌಕರ್ಯ ಕಡಿಮೆ. ಗ್ರಂಥಪಾಠವನ್ನು ಅನುಸ್ಯೂತವಾಗಿ ಮುದ್ರಿಸಿರುವುದರಿಂದಲೂ ಶಬ್ದರೂಪಗಳಿಂದಲೂ ಇದನ್ನು ತಿಳಿಯಬಹುದಾಗಿದೆ.

ಈ ಗ್ರಂಥದ ಇಂಗ್ಲಿಷ್ ಉಪೋದ್ಘಾತ, ಆ ಕಾಲದ ಅಗತ್ಯಕ್ಕೆ ತಕ್ಕಂತೆ, ಕವಿಕೃತಿ ವಿಚಾರದೊಂದಿಗೆ ಕನ್ನಡ ಸಾಹಿತ್ಯೇತಿಹಾಸದ ಪ್ರಬಂಧವೊಂದನ್ನು ಸಹ ಒಳಕೊಂಡಿದೆ. ಗ್ರಂಥಾಂತ್ಯದಲ್ಲಿ ಸೂತ್ರಪಾಠ, ಸೂತ್ರವರ್ಣಾನುಕ್ರಮಣಿ ಮತ್ತು ಉದಾಹೃತ ಕನ್ನಡ ಶಬ್ದಗಳ ಸೂಚಿ ಇವು ಗ್ರಂಥದ ಉಪಯುಕ್ತತೆಯನ್ನು ಹೆಚ್ಚಿಸುವಂತೆ ಸೇರಿವೆ.

ಕುಂಡಲಗಿರಿ ಆಚಾರ್ಯರು ಈ ಗ್ರಂಥದ ಕೆಲಭಾಗಕ್ಕೆ 'ಪ್ರಕಾಶಿಕೆ' ರಚಿಸಿ, ೧೯೦೮ರಲ್ಲಿ 'ವಾಗ್ಭೂಷಣ' ಪತ್ರಿಕೆಯಲ್ಲಿ ಮೊದಲು ಪ್ರಕಟಿಸಿದರು; ಅನಂತರ ೧೯೦೮ರಲ್ಲಿ ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದ 'ವಾಗ್ಭೂಷಣ ಗ್ರಂಥಮಾಲೆ'ಯಲ್ಲಿ, ಇದೇ ಪುಸ್ತಕರೂಪವಾಗಿ 'ಕರ್ನಾಟಕ ಶಬ್ದಾನುಶಾಸನ ಪ್ರಕಾಶಿಕಾ' (ಪ್ರಥಮ ಸಂಪುಟ) ಎಂಬ ಹೆಸರಿನಲ್ಲಿ ಹೊರಬಂದಿತು. ಕುಂಡಲಗಿರಿ ಆಚಾರ್ಯರು (ಮತ್ತು ಕಟ್ಟಿ ಶ್ರೀನಿವಾಸಮೂರ್ತಾಚಾರ್ಯರು) ಇದರ ಸಂಪಾದಕರು. ಮತ್ತೆ ೩೨ ವರ್ಷಗಳ ಅನಂತರದಲ್ಲಿ, ೧೯೪೦ರಲ್ಲಿ 'ಕರ್ಣಾಟಕ ಶಬ್ದಾನುಶಾಸನ ಪ್ರಕಾಶಿಕೆ' ಎಂಬ ಹೆಸರಿನಿಂದ ಇದರ 'ನೂತನ ಪರಿಷ್ಕರಣ'ವು ಶಿ.ಶಿ. ಬಸವನಾಳ ಅವರಿಂದ

ಸಂಪಾದಿತವಾಗಿ ಧಾರವಾಡದಿಂದ ಪ್ರಕಟವಾಗಿದೆ. ಕೊನೆಯ ೧೨೦ ಸೂತ್ರಗಳಿಗೆ ಮ. ಪ್ರ. ಪೂಜಾರರ ಟೀಕೆ ಟಿಪ್ಪಣಿಗಳು ಸೇರಿವೆ. ಗ್ರಂಥಕ್ಕೆ ಒಂದು ಲಘು ಪ್ರಸ್ತಾವನೆಯೂ ಕುಂಡಲಗಿರಿ ಆಚಾರ್ಯರ ಅಲ್ಪಪರಿಚಯವೂ ಸೇರಿವೆ.

ಆರ್. ನರಸಿಂಹಾಚಾರ್ಯರು 'ಕರ್ಣಾಟಕ ಶಬ್ದಾನುಶಾಸನ'ವನ್ನು ಹೊಸ ದಾಗಿ ಸಂಪಾದಿಸಿ, ೧೯೨೩ರಲ್ಲಿ ಬೆಂಗಳೂರಿನಿಂದ ಪ್ರಕಟಿಸಿದರು. ಈ ಪರಿಷ್ಕರಣಕ್ಕೆ ಅವರು ಮೈಸೂರು ಓರಿಯಂಟಲ್ ಲೈಬ್ರರಿಯ ೨ ಓಲೆ ಪ್ರತಿಗಳು, ಬಿ. ಮಲ್ಲಪ್ಪ ನವರೂ ಬಿ. ಪದ್ಮರಾಜ ಪಂಡಿತರೂ ಒದಗಿಸಿದ ಓಲೆಪ್ರತಿಗಳು, ಶ್ರವಣಬೆಳ್ಗೊಳದ ಜೈನಮಠದ ಗ್ರಂಥಭಂಡಾರದ ಓಲೆಪ್ರತಿ—ಇವನ್ನು ಬಳಸಿದ್ದಾರೆ. ಇವುಗಳ ಸಮಗ್ರತೆ, ಶುದ್ಧಾಶುದ್ಧತೆ ಮತ್ತು ಸ್ವಲ್ಪಮಟ್ಟಿಗೆ ಸಂಬಂಧ ಮತ್ತು ಸ್ವರೂಪಗಳನ್ನು ಸಹ ನರಸಿಂಹಾಚಾರ್ಯರು ನಿರೂಪಿಸಿದ್ದಾರೆ.

ಈ ಪರಿಷ್ಕರಣವನ್ನು ನರಸಿಂಹಾಚಾರ್ಯರು ಮೊದಲ ಮುದ್ರಣದ ಪರಿಷ್ಕೃತ ಮುದ್ರಣವೆಂದು ಕರೆದಿದ್ದರೂ ಇದು ನಾನಾ ದೃಷ್ಟಿಗಳಿಂದ ಒಂದು ಸ್ವತಂತ್ರ ಪರಿಷ್ಕರಣವೇ ಆಗಿದೆ; ಅವರ ಸ್ವಂತ ಪರಿಶ್ರಮದ ಫಲವೇ ಆಗಿದೆ. ಸಂಪಾದನೆ ಯಲ್ಲಿ ತಾವು ಅನುಸರಿಸಿದ ಕೆಲವು ಕ್ರಮಗಳನ್ನು ಅವರೇ ಹೀಗೆ ನಿರೂಪಿಸಿದ್ದಾರೆ:

"ಪೂರ್ಣವಾಗಿ ತೃಪ್ತಿಕರವಾದ ಹಸ್ತಪ್ರತಿ ಯಾವುದೂ ಈವರೆಗೆ ದೊರೆಯ ದಿರುವುದು ವಿಷಾದಕರವಾಗಿದೆ. ಈ ಪರಿಷ್ಕರಣವನ್ನು ಕೆಲವು ಕಡೆಗಳಲ್ಲಿ ಉತ್ತಮ ಪಡಿಸಿರುವುದರಿಂದ ಓದುಗರು ಅವನ್ನು ಮೆಚ್ಚಿಕೊಳ್ಳುವರೆಂದು ಭಾವಿಸಲಾಗಿದೆ. ಕೈಯಲ್ಲಿ ಹಿಡಿಯಲು ಅನುಕೂಲವಾಗುವಂತೆ ಗ್ರಂಥಗಾತ್ರವನ್ನು ಕ್ವಾರ್ಟೋದಿಂದ ಆಕ್ಟೇವ್‌ಗೆ ಬದಲಾಯಿಸಿದೆ. ವಿಷಯಾನುಗುಣವಾಗಿ ತಕ್ಕ ಮಿತಿಗೆ ಪ್ಯಾರಾಗಳನ್ನು ವಿಭಜಿಸಿದೆ, ಅಗತ್ಯಕ್ಕೆ ತಕ್ಕಂತೆ ಅನುಸ್ಯೂತವಾಗಿ ಬರೆದ ಶಬ್ದಗಳನ್ನು ಬೇರ್ಪಡಿ ಸಿದೆ. ಗ್ರಂಥಪಾಠದ ಆಶಯ ಆದಷ್ಟು ಸ್ಪಷ್ಟವಾಗುವಂತೆ ಧಾರಾಳವಾಗಿ ವಿರಾಮ ಚಿಹ್ನೆಗಳನ್ನು ಬಳಸಿದೆ. ವ್ಯಾಖ್ಯೆಯಲ್ಲಿ ಉದ್ಧೃತವಾದ ಸೂತ್ರಗಳನ್ನೂ ವಿವರಣೆಗೆ ಸ್ವೀಕೃತವಾದ ಶಬ್ದಗಳನ್ನೂ ದಪ್ಪಕ್ಷರಗಳಲ್ಲಿ ಮುದ್ರಿಸಿದೆ. ವ್ಯಾಖ್ಯೆಯಲ್ಲಿ ಕಾಣಿಸಿ ಕೊಳ್ಳುವ ಇತರ ಸೂತ್ರಗಳ ಆಕರಗಳನ್ನು ಆ ಸೂತ್ರಗಳ ಮಗ್ಗುಲಲ್ಲಿ ದುಂಡುಕಂಸ ಗಳಲ್ಲಿ ಸೂಚಿಸಿದೆ. ಇಲ್ಲಿ ಪಾಣಿನಿ, ಶಾಕಟಾಯನ ಮತ್ತು ಕಾತಂತ್ರ ಎಂಬುವಕ್ಕೆ ಪಾ, ಶಾ, ಕಾ ಎಂಬ ಸಂಕೇತಾಕ್ಷರಗಳನ್ನು ಬಳಸಿದೆ. ಆರು ಪರಿಶಿಷ್ಟಗಳನ್ನೂ ಪಾರಿಭಾಷಿಕ ಶಬ್ದಗಳ ಸೂಚಿಯನ್ನೂ ಕೊನೆಯಲ್ಲಿ ಸೇರಿಸಿದೆ. ಪಾಠಾಂತರಗಳನ್ನು ಅಡಿಟಿಪ್ಪಣಿಗಳಲ್ಲಿ ತೋರಿಸಿದೆ.

ಹಿಂದಿನ ಪರಿಷ್ಕರಣದಲ್ಲಿದ್ದ ರೋಮನ್ ಲಿಪ್ಯಂತರವನ್ನು, ಕನ್ನಡ ಓದುಗ ರಿಗೆ ಪ್ರಯೋಜನವಾಗದೆಂದು ಕೈಬಿಟ್ಟಿದೆ. ಆದರೆ ಸೂತ್ರಗಳ ಇಂಗ್ಲಿಷ್ ಅನುವಾದ ಗಳನ್ನೂ ಕೆಲವು ಇಂಗ್ಲಿಷ್ ಟಿಪ್ಪಣಿಗಳನ್ನೂ ಎಚ್ಚರಿಕೆಯಿಂದ ಪುನರ್ವಿಮರ್ಶಿಸಿ ಉಳಿಸಿಕೊಂಡಿದೆ."

ಈ ಗ್ರಂಥದ ಕವಿ ಕೃತಿ ವಿಚಾರದ ಉಪೋದ್ಘಾತವೂ ಗ್ರಂಥೋಪಯುಕ್ತ ಪರಿಶಿಷ್ಟಗಳೂ ತುಂಬ ವಿಷಯವ್ಯಾಪ್ತಿಯಿಂದ ಕೂಡಿವೆ. ಪಾಠಶುದ್ಧಿಯ ದೃಷ್ಟಿಯಿಂದ ಇನ್ನೂ ಕೆಲವೆಡೆ ತಿದ್ದುಪಡಿಗಳ ಆಗತ್ಯವಿದೆ (ಉದಾ: ಸೂ. ೨೯೬, ಪ್ರಯೋಗ; ೯೪, ೩೬೩ ಪ್ರ. ೩೬೮ ಪ್ರ.). ಹಸ್ತಪ್ರತಿಗಳ ಅಸಮರ್ಪಕತೆ ಬಹುಶಃ ಇಲ್ಲಿಯ ದೋಷಗಳಿಗೆ ಕಾರಣ.

ಡಿ. ಪದ್ಮನಾಭ ಶರ್ಮರು 'ನಲ್ನುಡಿಗನ್ನಡಿ' ಎಂಬ ಕನ್ನಡ ವ್ಯಾಖ್ಯಾನದೊಡನೆ, ೧೯೬೮ರಲ್ಲಿ ಇನ್ನೊಮ್ಮೆ, 'ಶಬ್ದಾನುಶಾಸನ'ವನ್ನು ಬೆಂಗಳೂರಿನಿಂದ ಹೊರತಂದಿದ್ದಾರೆ. ಇದರ ಸಿದ್ಧತೆಯಲ್ಲಿ ಈ ಹಿಂದಿನ ಮುದ್ರಿತ ಗ್ರಂಥಗಳನ್ನೇ ಆಧಾರವಾಗಿಟ್ಟುಕೊಂಡಿರುವಂತೆ ತೋರುತ್ತದೆ. ಇಲ್ಲಿ ಸೂತ್ರ, ಛೇದ, ಅನುವರ್ತನೆ ವೃತ್ತಿ, ಪ್ರಯೋಗ, ಅರ್ಥ, ಉದಾಹರಣೆ, ವಿಶೇಷಸೂಚನೆ ಎಂಬ ಅನುಕ್ರಮದಲ್ಲಿ ನಿರೂಪಣೆಯಿದೆ. ಸೂತ್ರ ವೃತ್ತಿ ಪ್ರಯೋಗಗಳು ಮಾತ್ರವೇ ಕವಿಪಾಠಕ್ಕೆ ಸೇರಿದವು; ಉಳಿದವು ಈ ಗ್ರಂಥದ ಸಂಪಾದಕರದು. ಆದರೆ ಇವೆರಡೂ ಇಲ್ಲಿ ಒಟ್ಟಿಗೆ ಬೆರೆತುಬಂದು, ಎಲ್ಲವೂ ಕವಿಪಾಠವೇ ಇರಬಹುದೇನೋ ಎಂಬ ಭ್ರಾಂತಿಗೆ ಕಾರಣವಾಗಿದೆ. ಇವುಗಳನ್ನು ಪ್ರತ್ಯೇಕಿಸಿ ತೋರಿಸುವುದು ಅವಶ್ಯವಿದ್ದಿತು. ಸೂಕ್ತವಾಗಿ ವಿಚಾರಮಾಡದೆ, ಹಿಂದಿನ ಪರಿಷ್ಕರಣಗಳಲ್ಲಿ ಕಂಡುಬರುವ ಕೆಲವು ತಪ್ಪುಗಳನ್ನೇ ಅನುವರ್ತಿಸಿರುವುದು ಕೆಲವೆಡೆ ಕಾಣುತ್ತದೆ(ಉದಾ: ಸೂ. ೨೦೩, ಸೂ. ೨೨೧, ಇ). ಅಚ್ಚಿನ ತಪ್ಪುಗಳೂ ಇವೆ (ಸೂ ೨, ಸೂ ೨೧೪ ಪ್ರಯೋಗ; ೩೦೯ ಪ್ರಯೋಗ, ಇ).

ತ. ಸು. ಶಾಮರಾಯರ ಪ್ರಧಾನ ಸಂಪಾದಕತ್ವದಲ್ಲಿ ಇದೇ ಗ್ರಂಥ ಮತ್ತೊಮ್ಮೆ ೧೯೭೫ರಲ್ಲಿ ಕರ್ನಾಟಕ ಸರ್ಕಾರದ ಪಠ್ಯಪುಸ್ತಕ ಇಲಾಖೆಯ ಮೂಲಕ ಪ್ರಕಟವಾಗಿದೆ. ಇದರ ಸಿದ್ಧತೆಯಲ್ಲಿಯೂ ಈ ಹಿಂದಿನ ಮುದ್ರಿತ ಗ್ರಂಥಗಳನ್ನೇ ಆಧಾರವಾಗಿಟ್ಟುಕೊಂಡಿದೆ. ಆದರಲ್ಲಿಯೂ ಆರ್. ನರಸಿಂಹಾಚಾರ್ಯರ ಪರಿಷ್ಕರಣದ ಸೂತ್ರ ವೃತ್ತಿ ಪ್ರಯೋಗಗಳನ್ನು ಅನುಸರಿಸಿದೆ. ಸೂತ್ರ, ವೃತ್ತಿ, ಅರ್ಥ, ಪ್ರಯೋಗ ಮತ್ತು ವಿಚಾರ ಎಂಬ ಅನುಕ್ರಮದಲ್ಲಿ ನಿರೂಪಣೆಯಿದೆ. ಸೂತ್ರ, ವೃತ್ತಿ ಪ್ರಯೋಗಗಳು ಮಾತ್ರವೇ ಕವಿಪಾಠ; ಉಳಿದವು ಈ ಸಂಪಾದಕರವು. 'ವಿಚಾರ' ಎಂಬ ಭಾಗದಲ್ಲಿ ಮೂಲದ ವ್ಯಾಖ್ಯಾನದ ವಿಷಯುಗಳನ್ನು ಯಥೋಚಿತವಾಗಿ ಸ್ವೀಕರಿಸಿ,. ಸ್ವಂತ ವಿಮರ್ಶೆಯ ಸಂಗತಿಗಳನ್ನೂ ಹೊಸದಾಗಿ ಕೂಡಿಸಿದೆ. ಈ ಪರಿಷ್ಕರಣದಲ್ಲಿ ಸಹ ಕವಿಪಾಠ ಮತ್ತು ಸಂಪಾದಕೀಯ ವಿವರಣೆಗಳು ಬೆರೆತು ಕವಿಪಾಠದ ಭ್ರಾಂತಿಯುಂಟುಮಾಡುವಂತೆ ವಿಷಯನ್ಯಾಸವಿದೆ. ಸೂಕ್ತವಾಗಿ ವಿಮರ್ಶಿಸದೆ ಆಗಿರುವ ತಪ್ಪುಗಳೂ ಇಲ್ಲಿಯೂ ಇವೆ (ಉದಾ: ಸೂ. ೯೪ ಪ್ರಯೋಗ, ಸೂ. ೧೬ರ ವಿಚಾರ, ಇ); ಅಚ್ಚಿನ ತಪ್ಪುಗಳು ಇಲ್ಲಿಯೂ ಸಾಕಷ್ಟಿವೆ (ಸೂ. ೮೨ ಪ್ರಯೋಗ, ಸೂ. ೧೭ ಪ್ರಯೋಗ, ಇ; ೨೦ ಪ್ರ). ಈ ಪರಿಷ್ಕರಣಕ್ಕೆ ಬರೆದಿರುವ ಉಪೋದ್ಘಾತವೂ ಕೊಟ್ಟಿರುವ ಕೆಲವು ಪರಿಶಿಷ್ಟಗಳೂ ಆರ್.

ನರಸಿಂಹಾಚಾರ್ಯರ ಪರಿಷ್ಕರಣದ ಪ್ರಯೋಜನವನ್ನು ಧಾರಾಳವಾಗಿ ಪಡೆದು ಸಿದ್ಧವಾಗಿವೆ.

ಈಗ ಕೆಲವು ಸಾಮಾನ್ಯಾಂಶಗಳನ್ನು ಇಲ್ಲಿ ಪ್ರಸ್ತಾವಿಸಬಹುದು. ಹಳಗನ್ನಡ ಭಾಷೆಗೆ ಬರೆದ ಮೂರು ಪ್ರಸಿದ್ಧ ವ್ಯಾಕರಣಗಳ ಸಂಪಾದನೆಯೂ ಅವುಗಳ ಹಸ್ತಪ್ರತಿಗಳು ಒಡ್ಡುವ ನಾನಾ ಸಮಸ್ಯೆಗಳಿಂದಾಗಿ ಒಂದು ಸಾಹಸಕಾರ್ಯವಾಗಿ ಪರಿಣಮಿಸಿದೆಯೆನ್ನುವುದು ಮೇಲಿನ ವಿವೇಚನೆಯಿಂದ ತಿಳಿಯುವುದು. ಇವುಗಳಲ್ಲಿ 'ಶಬ್ದಮಣಿದರ್ಪಣ'ದ ಸಂಬಂಧದಲ್ಲಿ ಕ್ಲೇಶಗಳು ಹೆಚ್ಚು. ಸಾಮಾನ್ಯ ಪ್ರತಿಕಾರರು ಕಾರಣವಾಗಿ, ಅಭ್ಯಾಸಿಗಳು ಕಾರಣವಾಗಿ ಹುಟ್ಟಿಕೊಂಡ ಸಮಸ್ಯೆಗಳು ಒಂದು ಗುಂಪಾದರೆ, ಈ ಗ್ರಂಥದ ವೃತ್ತಿವ್ಯಾಖ್ಯಾನಕಾರರೂ ಟೀಕಾಕಾರರೂ ಕಾರಣವಾಗಿ ಹುಟ್ಟಿಕೊಂಡ ಸಮಸ್ಯೆಗಳು ಇನ್ನೊಂದು ಗುಂಪಾಗಿವೆ. ಈಗಾಗಲೇ ಗಮನಿಸಿರುವಂತೆ ಈ ಗ್ರಂಥದ ಮಟ್ಟಿಗಾದರೂ ಸಶಾಸ್ತ್ರೀಯ ಸವಿಮರ್ಶ ಪರಿಷ್ಕರಣದ ಅಗತ್ಯವಿದೆಯೆನ್ನಬೇಕು. ಈಗ ಪ್ರಚಲಿತವಾಗಿರುವ, ಕೇಶಿರಾಜನದಿರಬಹುದೆಂದು ನಂಬಿರುವ, ವೃತ್ತಿಯೊಂದನ್ನು, ಅದಕ್ಕೆ ಸಂಬಂಧಿಸಿದ ಸೂತ್ರ ಪ್ರಯೋಗಗಳ ಸಹಿತವಾಗಿ ಬೇರೆ ಮಾಡಿಕೊಂಡು ಅವುಗಳ ನಡುವೆ ಸಾಮಂಜಸ್ಯವುಂಟೇ ಎಂದು ಪರಿಶೀಲಿಸುವುದು ಸೂಕ್ತ. ಇವುಗಳೊಂದಿಗೆ ಲಿಂಗಣಾರಾಧ್ಯನ ವೃತ್ತಿಪ್ರಯೋಗಗಳು ಹೈದರಾಬಾದು ಹಸ್ತಪ್ರತಿಯ ವ್ಯಾಖ್ಯಾನಕಾರನ ವ್ಯಾಖ್ಯೆಪ್ರಯೋಗಗಳು ಮತ್ತು ನಿಟ್ಟೂರು ನಂಜಯ್ಯನ ಟೀಕೆ ಇವುಗಳನ್ನು ಬೆರಸಿದರೆ ಪಾಠಸಮಸ್ಯೆಗಳು ಹೆಚ್ಚುತ್ತ ಹೋಗುತ್ತವೆ. ಬೇರೆ ಬೇರೆ ಕಾಲಕ್ಕೆ ಹುಟ್ಟಿಕೊಂಡ ಈ ಸಹಾಯಸಾಮಗ್ರಿಗಳನ್ನು ಕವಿಪಾಠದ ಸ್ಥಾನದಲ್ಲಿಟ್ಟು ಸಂಪಾದನಕಾರ್ಯ ಕೈಗೊಳ್ಳುವುದೂ ಮುದ್ರಿಸುವುದೂ ಸರಿಯಲ್ಲ. ತಮಗೆ ದೊರೆತ ಹಸ್ತಪ್ರತಿಗಳಲ್ಲಿ ಲಿಖಿತವಾಗಿದ್ದ ರೀತಿಯ ಸೂತ್ರಪಾಠದ ನೆರವು ಮತ್ತು ವೈಯಕ್ತಿಕ ವಿಚಾರ ವಿಮರ್ಶೆಗಳ ಲಹರಿಗಳಿಗೆ ತಕ್ಕಂತೆ ಇವರು ಕವಿಪಾಠವನ್ನು ರೂಪಾಂತರಗೊಳಿಸಿರುತ್ತಾರೆಂದು ಹೇಳಬೇಕು. ಈ ಸಮಸ್ಯೆಯನ್ನು ಲಕ್ಷಿಸಿ, ಹೆಚ್ಚಿನ ಹಸ್ತಪ್ರತಿಗಳ ನಡುವೆ ಸಾದೃಶ್ಯವಿರುವ ಕೇಶಿರಾಜಕೃತವೆನ್ನಬಹುದಾದ ಸೂತ್ರ ವೃತ್ತಿ ಮತ್ತು ಪ್ರಯೋಗಪಾಠವನ್ನು ಸಂಕಲಿಸಿ, ಇವುಗಳ ನಡುವೆ ಅಸಾಮಂಜಸ್ಯಗಳನ್ನೂ ಅಸಮರ್ಪಕತೆಗಳನ್ನೂ ಸಾಧ್ಯವಿದ್ದಮಟ್ಟಿಗೆ ಕನಿಷ್ಠಪ್ರಮಾಣಕ್ಕೆ ಇಳಿಸಿ, ಒಂದು ಸುಬೋಧವಾದ ತಾತ್ಕಾಲಿಕ ಪರಿಷ್ಕರಣವನ್ನು ಸಿದ್ಧಮಾಡುವುದೇ ಸದ್ಯಕ್ಕೆ ಸರಿಯಾದ ಕ್ರಮವೆನ್ನಬೇಕು. ಹೀಗೆ ಮಾಡುವಾಗ ಲಿಪಿಕಾರ ಸ್ಖಾಲಿತ್ಯಗಳನ್ನು ಕಳೆಯಲೇಬೇಕು. ಒಂದು ಮಿತಿಯಲ್ಲಿ, ಧೈರ್ಯವಾಗಿ, ಸಂಪಾದಕೀಯ ಕೌಶಲದ ಪರಿಷ್ಕರಣಗಳನ್ನೂ ಮಾಡಬೇಕಾಗಬಹುದು. 'ಕಾವ್ಯಾವಲೋಕನ'ದ ಶುದ್ಧ ಪಾಠದ ಅವಲಂಬನೆಯು ಇದಕ್ಕೆ ತುಂಬ ಸಹಕಾರಿಯೆನ್ನುವುದು ತಿಳಿದೇ ಇದೆ. ಭಾಷೆ ಛಂದಸ್ಸುಗಳ ದೃಷ್ಟಿಯಿಂದ ಪ್ರಯೋಗಗಳ ಪಾಠಶುದ್ಧಿಗೆ ಅವುಗಳ

ಆಕರಗಳ ನೆರವನ್ನು ಇನ್ನೂ ಚೆನ್ನಾಗಿ ಬಳಸಬೇಕಾಗುತ್ತದೆ; ಹಾಗೆ ಬಳಸುವುದು ತಪ್ಪಲ್ಲ.

ಇನ್ನು ಇಷ್ಟು ಪಾಠಸಮಸ್ಯೆಗಳು ಇಲ್ಲದ 'ಭಾಷಾಭೂಷಣ' ಮತ್ತು 'ಶಬ್ದಾನುಶಾಸನ'ಗಳ ಬಗ್ಗೆ ಹೇಳಬಹುದಾದರೆ, ಈ ಕೆಲವು ಮಾತುಗಳನ್ನು ಹೇಳಬಹುದು.

'ಭಾಷಾಭೂಷಣ' ಒಳ್ಳೆಯ ಆಧಾರಪ್ರತಿ ಮತ್ತು ವಿದ್ವಾಂಸರಾದ ಆರ್. ನರಸಿಂಹಾಚಾರ್ಯರ ಸಂಪಾದಕತ್ವ ಇವುಗಳ ಫಲವಾಗಿ ಸಾಕಷ್ಟು ಶುದ್ಧವಾಗಿದೆ. ಇನ್ನೂ ಒಳ್ಳೆಯ ಹೊಸ ಪ್ರತಿಗಳು ದೊರೆತಲ್ಲಿ, ಈಗ ಅಂಗೀಕೃತವಾದ ಪಾಠಕ್ಕೆ ಸಮರ್ಥನೆ ದೊರೆಯಬಹುದು; ಕೆಲವು ತಿದ್ದುಪಡಿಗಳಿಗೂ ಅವಕಾಶವಾಗಬಹುದು.

'ಶಬ್ದಾನುಶಾಸನ'ದ ಸಂಬಂಧದಲ್ಲಿ ಆರ್. ನರಸಿಂಹಾಚಾರ್ಯರ ಆವೃತ್ತಿ ಹೆಚ್ಚಿನ ಪಾಠಶುದ್ಧಿಯಿಂದ ಕೂಡಿದ್ದು, ಅನಂತರದ ಪರಿಷ್ಕರಣಕರ್ತರಿಗೆ ಅದು ಆಧಾರವಾಗಿ ಪರಿಣಮಿಸಿದೆ. ಇಲ್ಲಿಯೂ ನರಸಿಂಹಾಚಾರ್ಯರಿಗೆ ದೊರೆತ ಹಸ್ತಪ್ರತಿಗಳಲ್ಲಿ ಒಂದರಲ್ಲಿ ವೃತ್ತಿಯಿಲ್ಲವಾದರೆ, ಇನ್ನೊಂದರಲ್ಲಿ ವ್ಯಾಖ್ಯಾನವಿಲ್ಲ ಎನ್ನುವಂತಾಗಿದೆ. ಈ ಗ್ರಂಥದ ಪಾಠದ ವಿಷಯದಲ್ಲಿ ಕೆಲವು ಮೂಲಭೂತವಾದ ಕರ್ತೃತ್ವ ಸಮಸ್ಯೆಗಳೂ ಹೆಣೆದುಕೊಂಡಿವೆ. ಈ ಬಗೆಗೆ ಈ ಗ್ರಂಥದ ಸಂಪಾದಕರೆಲ್ಲ ವಿಮರ್ಶೆ ನಡೆಸಿರುವರಾದರೂ ಸಮಸ್ಯೆ ನಿರ್ಣಯದ ನೆಲೆಗೆ ಮುಟ್ಟಿದಂತೆ ತೋರುವುದಿಲ್ಲ. ಅಲ್ಲಿಯವರೆಗೆ ಸೂತ್ರ ವೃತ್ತಿ ವ್ಯಾಖ್ಯಾನ ಎಲ್ಲವೂ ಕವಿಪಾಠವಾಗಿಯೇ ಗೃಹೀತವಾಗಬೇಕು; ಇವುಗಳ ಸಂಪಾದನೆ, ಮುದ್ರಣ ಇತ್ಯಾದಿಗಳಲ್ಲಿ ಆರ್. ನರಸಿಂಹಾಚಾರ್ಯರ ಗ್ರಹಿಕೆಗಳು ಅನುಕರಣೀಯವಾಗಿವೆ.

ಕವಿಪಾಠದೊಂದಿಗೆ ಇತರ ಸಹಾಯಕ ಸಾಮಗ್ರಿಯೇನನ್ನೂ ಬೆರಸದೆ, ಅನ್ಯಕೃತ ವೃತ್ತಿ, ಟೀಕೆ, ಪಾಠಭೇದಗಳು ಇವನ್ನೆಲ್ಲ ಪ್ರತ್ಯೇಕ ಖಾನೆಗಳಲ್ಲಿ, ಅಡಿಟಿಪ್ಪಣಿ ಭಾಗದಲ್ಲಿ, ನಿರ್ದೇಶಿಸುವುದು ಸೂಕ್ತವೆಂದು ಹೇಳಬೇಕು. ಉಪೋದ್ಘಾತವಾಗಲಿ ಪರಿಶಿಷ್ಟವಾಗಲಿ ಅನಗತ್ಯವಾದ ವಿವರಗಳಿಂದ ಹೊರೆಯಾಗದೆ ಕ್ರಮವಾಗಿ ಕವಿಕೃತಿಚರಿತ್ರೆ, ಗ್ರಂಥಪ್ರಯೋಜನ ಮತ್ತು ಪಾಠಸಾಮಗ್ರಿಗಳಿಂದಲೂ ಪ್ರಯೋಗಗಳ ಆಕರಗಳು, ವಿವಿಧ ಪದಸೂಚಿಗಳು ಮುಂತಾದುವುಗಳಿಂದಲೂ ಕೂಡಿರಬೇಕಾದ್ದು ಅಪೇಕ್ಷಣೀಯವೆನ್ನಬಹುದು.

೨

## ಕನ್ನಡ ಛಂದೋಗ್ರಂಥಗಳು

ಈಗ ಛಂದೋಗ್ರಂಥಗಳ ಬಗೆಗೆ ಪರಿಶೀಲಿಸಬಹುದು. ದೊರೆತಿರುವ ಕನ್ನಡ ಛಂದೋಗ್ರಂಥಗಳು ಐದು. ಕಾಲಾನುಕ್ರಮವಾಗಿ ಇವು ಯಾವುವೆಂದರೆ,

‘ಛಂದೋಂಬುಧಿ’, ‘ಕವಿಜಿಹ್ವಾಬಂಧನ’, ‘ಛಂದಸ್ಸಾರ’, ‘ವೃತ್ತರತ್ನಾಕರ ಟೀಕೆ’ ಮತ್ತು ‘ನಂದಿಛಂದೋರ್ಣವ’. ಇವುಗಳಲ್ಲಿ ಹಸ್ತಪ್ರತಿಗಳ ಬಾಹುಳ್ಯದ ದೃಷ್ಟಿಯಿಂದಲೂ ಪಾಠಸಮಸ್ಯೆಗಳ ದೃಷ್ಟಿಯಿಂದಲೂ ‘ಛಂದೋಂಬುಧಿ’ಯೇ ಹೆಚ್ಚಿನ ವಿಮರ್ಶೆಗೆ ಗುರಿಯಾಗಿರುವ ಗ್ರಂಥವೆಂಬುದು ವಿದಿತವಾಗಿರುವ ವಿಷಯ. ಕಾಲಾನುಕ್ರಮವಾಗಿ ತೆಗೆದುಕೊಂಡರೂ ಮೊದಲು ವಿಮರ್ಶಿಸಬೇಕಾದ್ದು ಇದೇ ಗ್ರಂಥವನ್ನು.

‘ಛಂದೋಂಬುಧಿ’ಯ ಒಂದು ಕಲ್ಲಚ್ಚಿನ ಪ್ರತಿ, ೧೮೬೫ರಲ್ಲಿ, ಧಾರವಾಡದಿಂದ ಪ್ರಕಟವಾಯಿತು. ಉತ್ತರ ಕರ್ನಾಟಕದ ಬೆಟಗೇರಿಯಿಂದ ತಾವು ಸಂಗ್ರಹಿಸಿದ ಕಾಗದ ಪ್ರತಿಯಲ್ಲಿ (ಬಿ) ಕಂಡುಬರುವ ಪಾಠಸಂಪ್ರದಾಯಕ್ಕೆ ಇದು ಸೇರಿದ್ದು ಎಂದು ಕಿಟ್ಟೆಲ್ ತಿಳಿಸಿದ್ದಾರೆ. ಇದನ್ನು ದೊರಕಿಸಿಕೊಂಡು ಪರಿಶೀಲಿಸಲು ನನಗೆ ಸಾಧ್ಯವಾಗಲಿಲ್ಲ. ಬೆಟಗೇರಿಯ ಪ್ರತಿ ತುಂಬ ಅಶುದ್ಧವಾದ ಪಾಠಸಂಪ್ರದಾಯವನ್ನು ಉಳ್ಳದ್ದು ಎಂದು ಕಿಟ್ಟೆಲ್ ಅವರೇ ತಿಳಿಸಿರುವುದರಿಂದ, ಇದು ಸಹ ಹಾಗೆಯೇ ಇದ್ದಿರಬಹುದು.

‘ಛಂದೋಂಬುಧಿ’ಯ ಅನಂತರದ ಪ್ರಕಟನೆ ೧೮೭೫ರಲ್ಲಿ, ಮಂಗಳೂರಿಂದ. ಕಿಟ್ಟೆಲ್ ಇದರ ಸಂಪಾದಕರು. ಇವರು ಸಂಪಾದಿಸಿದ ಮುದ್ರಿತ ಮತ್ತು ಹಸ್ತಪ್ರತಿಗಳ ಸಂಖ್ಯೆ ೧೭. ಇವನ್ನು ಯಾವ ಯಾವ ವ್ಯಕ್ತಿಗಳಿಂದ ಮತ್ತು ಸ್ಥಳಗಳಿಂದ ಸಂಗ್ರಹಿಸಲಾಯಿತು, ಕಾಲಾನುಗುಣವಾಗಿ ಭಿನ್ನಪಾಠಗಳ ಸಂಪ್ರದಾಯವೇನು, ತೌಲನಿಕ ಪರಿಶೀಲನೆಯಿಂದ ಶುದ್ಧಪಾಠವನ್ನು ಗೊತ್ತುಮಾಡುವುದು ಹೇಗೆ, ಈ ಮುಂತಾದ ವಿಷಯಗಳನ್ನು ಪೀಠಿಕೆಯ ಮೊದಲಲ್ಲೇ ಅವರು ಚರ್ಚಿಸಿದ್ದಾರೆ. ಈ ಹಿನ್ನೆಲೆಯಲ್ಲಿ ತಮ್ಮ ಪರಿಷ್ಕರಣವನ್ನು ಸಿದ್ಧಮಾಡಿದ್ದಾರೆ. ಪ್ರತಿಗಳ ಸಂಗ್ರಹ, ಪಾಠಸಂಕಲನ, ಪಾಠಭೇದಗಳ ಸೂಚನೆ ಇವುಗಳ ಬಗೆಗೆ ಒಂದು ಶಾಸ್ತ್ರೀಯ ದೃಷ್ಟಿಯೂ ಗ್ರಂಥಸಂಪಾದನೆಯ ವಿವಿಧ ಸಮಸ್ಯೆಗಳ ಅರಿವೂ ಕೆಲಮಟ್ಟಿಗಾದರೂ ಅವರಿಗುಂಟು ಎಂದು ಖಚಿತವಾಗಿ ಹೇಳಬಹುದು.

ಕಿಟ್ಟೆಲ್ ಸಂಪಾದಿಸಿರುವ ‘ಛಂದೋಂಬುಧಿ’ಯ ರೂಪರೇಖೆಗಳನ್ನು ಅನ್ಯತ್ರ ನಾನು ವಿಶದವಾಗಿ ನಿರೂಪಿಸಿದ್ದೇನೆ. ಅವರು ಯಾವ ಒಂದು ಹಸ್ತಪ್ರತಿಯನ್ನೂ ಪೂರ್ತಿ ನೆಚ್ಚಿಲ್ಲ ಎಂಬುದು ನಿಜ. ಆದರೆ ಪ್ರಕ್ಷೇಪಗಳನ್ನು ಬೇರ್ಪಡಿಸಲು ಅವರು ಅನುಸರಿಸಿರುವ ಕ್ರಮ ಪೂರ್ತಿ ಸಮರ್ಪಕ ಎನ್ನುವಂತಿಲ್ಲ. ಇದಕ್ಕೆ ಮುಖ್ಯಕಾರಣ, ಅವರು ಹಸ್ತಪ್ರತಿಗಳ ಪೀಳಿಗೆಯನ್ನು ಗುರುತಿಸದೆ, ಅವುಗಳ ಪರಸ್ಪರ ಸಂಬಂಧವನ್ನು ವಿಶದಪಡಿಸಿಕೊಳ್ಳದೆ, ಎಲ್ಲಾ ಹಸ್ತಪ್ರತಿಗಳಿಗೂ ಸಮಾನವಾದ ಬೆಲೆಯನ್ನು ಕೊಟ್ಟದ್ದು ಎಂದು ತೋರುತ್ತದೆ. ಕವಿಪಾಠ ಭಿನ್ನಪಾಠಗಳನ್ನು ಪ್ರತ್ಯೇಕ ಗಾತ್ರದ ಅಕ್ಷರಗಳಲ್ಲಿ ತೋರಿಸಿದ್ದರೂ ಅಭ್ಯಾಸಿಗಳಿಗೆ ಅವೆಲ್ಲಾ ಕವಿಪಾಠವೆಂದೇ ಭ್ರಾಂತಿಯುಂಟಾಗುವುದು ಶಕ್ಯವಿದೆ. ಮೂಲಕ್ಕೆ ಸೇರಿರದ ಉದಾಹೃತಪದ್ಯಗಳನ್ನು

ಭಿನ್ನಪಾಠಗಳ ಜತೆಗೇ ಸೇರಿಸಿರುವುದು ಆ ಭ್ರಾಂತಿಯನ್ನು ಹೆಚ್ಚಿಸುತ್ತದೆ. ಪ್ರಕ್ಷಿಪ್ತವೆಂದು ತಿಳಿದೂ ಕೆಲವು ಭಾಗಗಳನ್ನು ಮೂಲದೊಂದಿಗೆ ಸೇರಿಸುತ್ತಿರುವುದಾಗಿ ಹೇಳಿರುವುದೂ ಅಲ್ಲಲ್ಲಿ ಕವಿಪಾಠವನ್ನು ತಿದ್ದಿರುವುದೂ 'ೞ' ಅಕ್ಷರವನ್ನು ಬಳಸದಿರುವುದೂ ಇಲ್ಲಿಯ ಕೆಲವು ದೋಷಗಳೆಂದು ಹೇಳಬಹುದು.

ಹೀಗಿದ್ದರೂ ಗ್ರಂಥಪಾಠದ ಸುಲಭವಾದ ತಿಳವಳಿಕೆಗೆ ಇಂಗ್ಲಿಷಿನಲ್ಲಿ ಲಘು ಟಿಪ್ಪಣಿ ನೀಡುವುದು, ಪ್ರಸ್ತಾರಗಳನ್ನು ಕೊಡುವುದು, ಪದಸೂಚಿಗಳು ಇವೆಲ್ಲ ಒಂದು ದೃಷ್ಟಿಯಿಂದ ಮೆಚ್ಚತಕ್ಕ ಅಂಶಗಳು. ಎಲ್ಲಕ್ಕಿಂತ ಹೆಚ್ಚಾಗಿ ಷಟ್ಪ್ರತ್ಯಯದ ಷಷ್ಠಾಧಿಕಾರದಲ್ಲಿ, ಪಾಠ ಮತ್ತು ಪಾಠಾಂತರಗಳನ್ನು ಕೊಟ್ಟಿರುವ ರೀತಿ ಇಂದಿನ ಪ್ರಚಲಿತ ಸಂಪ್ರದಾಯಕ್ಕೆ ಪ್ರಥಮ ಮಾರ್ಗದರ್ಶಕ ಪ್ರಯತ್ನವಾಯಿತೆಂದು ಭಾವಿಸಲು ಅವಕಾಶವಿದೆ.

ಮುಂದಿನ 'ಛಂದೋಂಬುಧಿ'ಯ ಪರಿಷ್ಕರಣ ಕರ್ಣಾಟಕ ಕಾವ್ಯ ಕಲಾನಿಧಿಯದು. ಇದರ ಸಂಪಾದಕರು ಯಾರು, ಪ್ರಕಟನೆ ಎಂದು ಎನ್ನುವುದು ಪುಸ್ತಕದಿಂದ ತಿಳಿಯುವಂತಿಲ್ಲ. ಪರಿಷ್ಕರಣಕ್ಕೆ ೫ ಪ್ರತಿಗಳನ್ನು ಬಳಸಿದೆ. ಕಿಟ್ಟೆಲ್ ತಮ್ಮ ಪರಿಷ್ಕರಣದ ಷಷ್ಠಾಧಿಕಾರದ ಸಂದರ್ಭದಲ್ಲಿ ಮಾಡಿದಂತೆ ಪಾಠಾಂತರಗಳನ್ನು ಅಡಿಟಿಪ್ಪಣಿಯಲ್ಲಿ ಗುರುತಿಸಿದೆ. ಇದು ತಕ್ಷಣದ ಪರಿಶೀಲನೆಗೆ ಸಹಕಾರಿಯಾದ್ದರಿಂದ ಒಳ್ಳೆಯ ಕ್ರಮ. ಈ ಪಾಠಭೇದಗಳು ಬಿಡಿಶಬ್ದಗಳನ್ನಷ್ಟೇ ಅಲ್ಲದೆ, ದೀರ್ಘವಾಕ್ಯಗಳ ಪ್ರಮಾಣದಲ್ಲಿಯೂ ಇವೆ. ಇದೂ ಕಿಟ್ಟೆಲ್ ಕ್ರಮದ ಮುನ್ನಡೆಯೇ. ಪ್ರತ್ಯಂತರಗಳ ಅಧಿಕಪಾಠಗಳನ್ನು ಪ್ರಕ್ಷಿಪ್ತವೆಂದೂ ಅನ್ಯಕರ್ತೃಕಗಳೆಂದೂ ಬರೆದು ಪ್ರತ್ಯೇಕವಾದ ಖಾನೆಯಲ್ಲಿ ಮೂಲಪಾಠವೆಂದು ಅಂಗೀಕೃತವಾದ ಪಾಠದ ಕೆಳಗೆ ತೋರಿಸಿದೆ. ಇಲ್ಲಿ ಕಿಟ್ಟೆಲ್‌ರ ಹಾಗೆ ಮೂಲಪಾಠದ ಜೊತೆಗೇ ಅಕ್ಷರಗಳ ಗಾತ್ರಭೇದದೊಂದಿಗೆ ಅವನ್ನು ತೋರಿಸದೆ ಇರುವುದೂ ಮೆಚ್ಚತಕ್ಕ ಬೆಳವಣಿಗೆಯೇ. ಗ್ರಂಥಾಂತ್ಯದಲ್ಲಿ ಗ್ರಂಥೋಪಯುಕ್ತ ಸಂಕ್ಷಿಪ್ತ ಟಿಪ್ಪಣಿಗಳನ್ನು ಕೊಟ್ಟಿರುವುದು ಅಭ್ಯಾಸಿಗಳಿಗೆ ಪ್ರಯೋಜನಕಾರಿ.

ಇದರ ಮುಂದಿನದು, ೧೯೪೬ರಲ್ಲಿ ಎಚ್. ಎಸ್. ರಾಮುಸ್ವಾಮಿ ಅಯ್ಯಂಗಾರ್ ಹೊರತಂದ ಮದ್ರಾಸ್ ಪರಿಷ್ಕರಣ. ಇದಕ್ಕೆ ಆಧಾರವಾದ್ದು ೭ ಹಸ್ತಪ್ರತಿಗಳು. ಈ ಹಸ್ತಪ್ರತಿಗಳಲ್ಲಿ ಭಿನ್ನಭಿನ್ನಗಳಾದ ಅಶುದ್ಧಪಾಠಗಳು ವಿಶೇಷವಾಗಿವೆಯೆಂದೂ ಅನ್ಯಗ್ರಂಥಗಳ ಭಾಗಗಳು ಮಿಶ್ರಿತವಾಗಿವೆಯೆಂದೂ ತಿಳಿಸಿ, ಇವನ್ನೆಲ್ಲಾ ತಕ್ಕಮಟ್ಟಿಗೆ ಬೇರ್ಪಡಿಸಿ, ಸಂದಿಗ್ಧವಾದುವನ್ನು ರೇಖೆಯ ಕೆಳಗೂ ಉಳಿದುವನ್ನು ಪರಿಶಿಷ್ಟದಲ್ಲೂ ಕೊಡಲಾಗಿದೆಯೆಂದು ತಮ್ಮ ಕ್ರಮವನ್ನು ಅವರು ತಿಳಿಸಿದ್ದಾರೆ. ಅನುಪಯುಕ್ತವೆಂದು ವರ್ಜಿಸಿದ ಪಾಠಗಳೂ ಉಂಟು. ಪಾಠಾಂತರಗಳನ್ನೂ ಜೊತೆಗೆ ಅಲ್ಲಲ್ಲಿ ವಿಶೇಷಾಂಶಗಳ ವಿವರಗಳನ್ನೂ ಅಡಿಟಿಪ್ಪಣಿಗಳಲ್ಲೇ ತೋರಿಸಿದೆ. ಇಷ್ಟಾಗಿ ಪ್ರಕ್ಷೇಪವೆಂದು ಅರಿವಿದ್ದೂ ಬೇರೆ ಗ್ರಂಥಗಳ ಪ್ರಾಸವಿಚಾರವನ್ನು ಗ್ರಂಥಭಾಗದಲ್ಲೇ

ಕೂಡಿಸಿರುವುದು, ಷಷ್ಠಾಧಿಕಾರದಲ್ಲಿ ಷಟ್ಪ್ರತ್ಯಯದ ಸೂತ್ರಗಳಿಗೆ ಗದ್ಯದಲ್ಲಿ ಸ್ಪಷ್ಟ ವಿವರಣೆಯನ್ನು ಬರೆದು ಸೇರಿಸಿರುವುದು—ಈ ಮುಂತಾದ ಕಾರಣಗಳಿಂದ ಸಂಪಾದನೆಯ ಪಾಠಮೌಲ್ಯ ಕುಗ್ಗಿದೆ. ಸಣ್ಣಪುಟ್ಟ ಪಾಠವ್ಯತ್ಯಾಸಗಳನ್ನು ಹೊಸದಾಗಿ ಮಾಡಿ, ಜಯಕೀರ್ತಿಯ 'ಛಂದೋನುಶಾಸನ'ದ ಸಪ್ತಮಾಧಿಕಾರವನ್ನು ಕನ್ನಡ ಅರ್ಥಸಹಿತವಾಗಿ ಪರಿಶಿಷ್ಟಭಾಗದಲ್ಲಿ ಉದ್ಧರಿಸಿ, ಇದೇ ಗ್ರಂಥವನ್ನು ೧೯೩೭ರಲ್ಲಿ ಎಚ್. ಶೇಷ ಅಯ್ಯಂಗಾರ್ ಮತ್ತು ಎಚ್. ಎಸ್. ರಾಮಸ್ವಾಮಿ ಅಯ್ಯಂಗಾರ್ಯರು ತಮ್ಮ ಸಂಯುಕ್ತ ಸಂಪಾದಕತ್ವದಲ್ಲಿ ಪುನರ್ಮುದ್ರಣ ಮಾಡಿದರು.

ಮುಂದಿನ ಪರಿಷ್ಕರಣ ೧೯೭೪ರಲ್ಲಿ ಮೈಸೂರಿನಿಂದ ಪ್ರಕಟವಾಯಿತು. ಇದು 'ಕನ್ನಡ ಛಂದಸ್ಸಂಪುಟ'ದಲ್ಲಿ ಸೇರ್ಪಡೆಯಾದ ಮೊದಲನೆಯ ಪುಸ್ತಕ. ಇದರ ಸಂಪಾದಕರು ಡಾ|| ಎಲ್. ಬಸವರಾಜು ಅವರು. ಈ ಹಿಂದಿನ ಮುದ್ರಿತ ಪರಿಷ್ಕರಣಗಳನ್ನೂ ಮೈಸೂರು ಕನ್ನಡ ಅಧ್ಯಯನ ಸಂಸ್ಥೆಯ ೬ ಓಲೆ ಮತ್ತು ಕಾಗದ ಪ್ರತಿಗಳನ್ನೂ ಬಳಸಿಕೊಂಡು ತಮ್ಮ ಪರಿಷ್ಕರಣವನ್ನು ಅವರು ಸಿದ್ಧಪಡಿಸಿರುವರೆಂದು ತಿಳಿಯುತ್ತದೆ. ಕೆಲಭಾಗಗಳಲ್ಲಿ, ಗ್ರಂಥಪಾಠದ ಕೆಳಗೆ ವಿಸ್ತಾರವಾಗಿಯೇ ಪ್ರತ್ಯಂತರಗಳ ಪಾಠಭೇದಗಳನ್ನೂ ಅವುಗಳ ವಿಮರ್ಶೆಯನ್ನೂ ಅವುಗಳ ಆನುಪೂರ್ವಿಯ ವ್ಯತ್ಯಾಸವಿವರಗಳನ್ನೂ ವಿಶೇಷಾಂಶಗಳ ಟಿಪ್ಪಣಿಗಳನ್ನೂ ಸಣ್ಣ ಗಾತ್ರದ ಅಕ್ಷರಗಳಲ್ಲಿ ಬರೆದು ಮುದ್ರಿಸಿದೆ. ಗಣರಚನೆ, ಪ್ರಸ್ತಾರ, ಯತಿಸ್ಥಾನ ಇವನ್ನು ಸೂಕ್ತ ಸಂಜ್ಞೆ, ಸಂಕೇತಗಳಿಂದ ತೋರಿಸಿದೆ. ಗಮನಾರ್ಹವಾದ ಪಾಠವ್ಯತ್ಯಾಸಗಳನ್ನು ಪಾಠನಿಷ್ಕರ್ಷೆಯಲ್ಲಿ ಗಮನಿಸಬಹುದಾಗಿದೆ. ಪಾಠನಿಷ್ಕರ್ಷೆಯಲ್ಲಿಯೂ ಪೀಠಿಕೆ ಮೊದಲಾದ ಭಾಗಗಳಲ್ಲಿಯೂ ಅಲ್ಲಲ್ಲಿ ವಿವಾದಗ್ರಸ್ತವಾದ ಅಂಶಗಳಿವೆ; ಲೋಪ ದೋಷಗಳೂ ಇವೆ; ಮುದ್ರಣ ಸ್ಖಾಲಿತ್ಯಗಳಂತೂ ಅಧಿಕವಾಗಿವೆ.

'ಛಂದೋಂಬುಧಿ'ಯ ಇತ್ತೀಚೆಯ ಪರಿಷ್ಕರಣವೆಂದರೆ ಕುಕ್ಕಿಲ ಕೃಷ್ಣಭಟ್ಟರು ಪರಿಷ್ಕರಿಸಿ ೧೯೭೬ರಲ್ಲಿ ಮೈಸೂರಿನಿಂದ ಪ್ರಕಟಪಡಿಸಿರುವುದೇ ಆಗಿದೆ. ಮೈಸೂರಿನ ಕನ್ನಡ ಅಧ್ಯಯನ ಸಂಸ್ಥೆಯ ಹಸ್ತಪ್ರತಿಭಂಡಾರದ ಲಬ್ಧ ಹಸ್ತಪ್ರತಿಗಳನ್ನೆಲ್ಲ ಬಳಸಿಕೊಂಡಿರುವುದಾಗಿ ಅವರು ತಿಳಿಸಿದ್ದಾರೆ. ಯಾವ ಪ್ರತಿಯದು ಎಂಬ ಸೂಚನೆಯಿಲ್ಲದೆ, ಕೆಲವೊಮ್ಮೆ ಅಡಿಟಿಪ್ಪಣಿಗಳಲ್ಲಿ ಪಾಠಾಂತರಗಳನ್ನು ತೋರಿಸಿರುವುದು ಹೊರತು, ಸಾಮಾನ್ಯವಾಗಿ ಪಾಠಾಂತರಗಳ ನಿರ್ದೇಶನವಿಲ್ಲ. ಗ್ರಂಥಾಂತ್ಯದಲ್ಲಿ ಮೊದಲನೆಯ ಪರಿಶಿಷ್ಟದಲ್ಲಿ ಪ್ರತಿಗಳ ಸೂಚನೆಯೊಂದಿಗೆ ಕೆಲವು ಭಿನ್ನಪಾಠಗಳನ್ನೂ ಅಧಿಕಪಾಠಗಳನ್ನೂ ತೋರಿಸಿದೆ. ಮೂಲಪಾಠದೊಂದಿಗೇ ವಿಷಯ ಅಥವಾ ವೃತ್ತಗಳ ಹೆಸರು, ಗ್ರಂಥಾಂತರಗಳಿಂದ ತಿಳಿಯುವ ವೃತ್ತಗಳ ಪರ್ಯಾಯನಾಮಗಳು, ಗಣವಿಭಜನೆ ಯತಿಸ್ಥಾನಗಳನ್ನು ನಿರ್ದೇಶಿಸುವ ಚಿಹ್ನೆಗಳು, ಇವೆಲ್ಲಕ್ಕಿಂತ ಮುಖ್ಯವಾಗಿ ಪಾಠಗಳ ಪ್ರಕ್ಷೇಪ, ಸಂಶಯ, ವಿಶೇಷವಿಷಯ ಇತ್ಯಾದಿಗಳ ಸಾಂದರ್ಭಿಕ ಟಿಪ್ಪಣಿಗಳು—ಈ ಮುಂತಾದುವನ್ನು ಕೊಡಲಾಗಿದೆ. ಇದು ಸೂಕ್ತವಾದ ಕ್ರಮವಾ

ವಲ್ಲ. ಕೆಲವೆಡೆ ಪಾಠನಿಷ್ಕರ್ಷೆ ಹಿಂದಿನ ಪರಿಷ್ಕರಣಗಳಿಗಿಂತ ಬೇರೆಯಾಗಿ ತೃಪ್ತಿಕರವಾಗಿದ್ದರೂ ಇನ್ನು ಕೆಲವಡೆ ಸರಿಯಿಲ್ಲದಿರುವುದು ಕಾಣುತ್ತದೆ; 'ಱ' ಅಕ್ಷರದ ಬಳಕೆಯಲ್ಲಿ ಅಲ್ಲಲ್ಲಿ ತಪ್ಪಿದೆ.

ಈವರೆಗೆ 'ಛಂದೋಂಬುಧಿ'ಯ ಪರಿಷ್ಕರಣಗಳ ಒಂದು ಸಾಮಾನ್ಯ, ಸಂಕ್ಷಿಪ್ತ ಪರಿಚಯವನ್ನು ಪಡೆದ ಹಾಗೆ ಆಯಿತು. ಈ ಎಲ್ಲ ಪರಿಷ್ಕರಣಗಳೂ ಗ್ರಂಥಕರ್ತೃ ಹಾಗೂ ಗ್ರಂಥವಸ್ತು ಇವನ್ನು ಕುರಿತಂತೆ ಯಥೋಚಿತ ವಿಸ್ತಾರದ ಪೀಠಿಕೆಗಳನ್ನೂ ಪರಿಶಿಷ್ಟಗಳನ್ನೂ ಒಳಕೊಂಡಿವೆಯೆಂಬುದನ್ನು ಅವಶ್ಯವಾಗಿ ತಿಳಿಸಬೇಕಾಗಿದೆ.

ಮುಂದೆ ಪರಿಚಯಮಾಡಿಕೊಳ್ಳಬೇಕಾದ ಛಂದೋಗ್ರಂಥವೆಂದರೆ ಈಶ್ವರ ಕವಿಯ 'ಕವಿಜಿಹ್ವಾಬಂಧನ' (ಸು. ೧೫೦೦).

ಈ ಗ್ರಂಥದ ಪ್ರಥಮ ಪರಿಷ್ಕರಣವನ್ನು ಎಚ್. ಶೇಷ ಅಯ್ಯಂಗಾರ್ ಅವರು ಸಿದ್ಧಪಡಿಸಿದರು. ಇದು ಮದ್ರಾಸಿನ ಎ. ಓ. ಆರ್. ಪತ್ರಿಕೆಯ ೩ ಮತ್ತು ೪ನೆಯ ಸಂಪುಟಗಳಲ್ಲಿ, ೧೯೩೯ರಲ್ಲಿ ಪ್ರಕಟವಾಯಿತು. ೩ ಅಸಮಗ್ರವೂ ಅಶುದ್ಧವೂ ಆದ ಹಸ್ತಪ್ರತಿಗಳ ಆಧಾರದ ಮೇಲೆ ಇದು ಸಿದ್ಧವಾಗಿದೆ. ಮೈಸೂರು ಪ್ರಾಚ್ಯಕೋಶಾಗಾರದಿಂದಲೂ ಬೊಮ್ಮರಸಪಂಡಿತರಿಂದಲೂ ಈ ಹಸ್ತಪ್ರತಿಗಳನ್ನು ದೊರಕಿಸಿಕೊಂಡಿದೆ. ಇದರ ಸ್ವರೂಪವನ್ನು 'ಕವಿಜಿಹ್ವಾಬಂಧನ ವಿಮರ್ಶೆ' ಎಂಬುದರ ಆದಿಯಲ್ಲಿ ಸವಿವರವಾಗಿಯೇ ತಿಳಿಸಿದೆ.

ಈ ಕೃತಿಯ ಎರಡನೆಯ ಪರಿಷ್ಕರಣವನ್ನು ಸಿದ್ಧಪಡಿಸಿದವರು ಆರ್. ಎಸ್. ಪಂಚಮುಖಿಯವರು. ಧಾರವಾಡದ ಕನ್ನಡ ಸಂಶೋಧನ ಸಂಸ್ಥೆಯ ವತಿಯಿಂದ ೧೯೫೦ರಲ್ಲಿ ಇದು ಹೊರಬಂದಿತು. ಆ ಸಂಸ್ಥೆಯ ಒಂದು ಸಮಗ್ರ ಓಲೆಪ್ರತಿಯನ್ನೂ ಇತರ ಮೂಲಗಳಿಂದ ದೊರಕಿಸಿಕೊಂಡ ಇನ್ನೂ ೫ ಅಸಮಗ್ರ ಹಸ್ತಪ್ರತಿಗಳನ್ನೂ ಆಧಾರವಾಗಿಟ್ಟುಕೊಂಡು ಇವರು ತಮ್ಮ ಪರಿಷ್ಕರಣವನ್ನು ಸಿದ್ಧಪಡಿಸಿದ್ದಾರೆ. ಆಧಾರಪ್ರತಿಯಾಗಿ ಪೂರ್ವೋಕ್ತ ಸಂಸ್ಥೆಯ ಪ್ರತಿಯನ್ನು ಗ್ರಹಿಸಿ, ಅನ್ಯಪ್ರತಿಗಳ ಪಾಠಭೇದಗಳನ್ನೆಲ್ಲ, ಅವು ಅಧಿಕ ಪಾಠವಾಗಿರಲಿ, ವ್ಯತ್ಯಸ್ತಪಾಠವಾಗಿರಲಿ ವಿವರವಾಗಿಯೇ ಅಡಿಟಿಪ್ಪಣಿಗಳಲ್ಲಿ ತೋರಿಸಿದೆ. ಹೀಗೆ ತೋರಿಸಿರುವ ಪಾಠಭೇದಗಳು ವಿಪುಲವಾಗಿವೆ; ಪ್ರತಿಕಾರ ಸ್ಖಾಲಿತ್ಯಗಳನ್ನೂ ಪಾಠಾಂತರಗಳಾಗಿ ತೋರಿಸಿದೆ.

ಈ ಪರಿಷ್ಕರಣದ ದೋಷಗಳನ್ನು ಎ. ಆರ್. ಕೃಷ್ಣಶಾಸ್ತ್ರಿಗಳು ತಮ್ಮ ಪರಿಷ್ಕರಣದ ಪೀಠಿಕೆಯಲ್ಲಿ ಎತ್ತಿಹೇಳಿದ್ದಾರೆ. ಮೂಲಪಾಠಕ್ಕೆ ಸೇರಿದ್ದೇ ಅಲ್ಲವೇ ಎಂದು ಯಾವ ಮಾನಸೂತ್ರದಿಂದಲೂ ವಿಮರ್ಶಿಸದೆ, ತಾವೇ ಸೂಚಿಸುವಂತೆ ತೀರ ಈಚಿನ ಕಾಲಕ್ಕೆ ಸೇರಿದ ಹಸ್ತಪ್ರತಿಯೊಂದನ್ನು, ಪ್ರಾಯಃ ಅದು ಸಮಗ್ರವಾಗಿದೆಯೆಂಬ ಒಂದೇ ಕಾರಣಕ್ಕಾಗಿ, ಕವಿಪಾಠವಾಗಿ ಗ್ರಹಿಸಿರುವುದು ವಿಚಾರಣೀಯವಾಗಿ ತೋರುತ್ತದೆ. ಅಲ್ಲದೆ ಸಾಮಾನ್ಯ ಪ್ರತಿಕಾರ ಸ್ಖಾಲಿತ್ಯಗಳನ್ನೂ ತಿದ್ದದೆ,

ಅಂಗೀಕೃತವಾದ ಪಾಠ ಅರ್ಥವಾಗುವುದೇ ಇಲ್ಲವೇ ಎನ್ನುವುದನ್ನೂ ನೋಡದೆ ಕವಿಪಾಠವಾಗಿ ಮುದ್ರಿಸಿರುವುದಂತೂ ಸರ್ವಥಾ ಸರಿಯಲ್ಲ.

ಮುಂದಿನದು ಎ. ಆರ್. ಕೃಷ್ಣಶಾಸ್ತ್ರಿಗಳ ಪರಿಷ್ಕರಣ. ಇದು ಮೊದಲು ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆಯ ಜೂನ್-ಡಿಸೆಂಬರ್ ೧೯೫೪ರ ಸಂಯುಕ್ತ ಸಂಚಿಕೆಯಲ್ಲಿ (ಸಂ. ೩೬, ಸಂ. ೧೨) ಪ್ರಕಟವಾಯಿತು; ಬಳಿಕ ೧೯೫೬ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ಇಲ್ಲಿಂದ ಪ್ರತ್ಯೇಕ ಗ್ರಂಥವಾಗಿ ಹೊರ ಬಿದ್ದಿತು. ಶಾಸ್ತ್ರಿಗಳು ಪ್ರಕ್ಷಿಪ್ತಗಳಿಲ್ಲದೆ ಮೂಲಗ್ರಂಥಕ್ಕೆ ತುಂಬ ಹತ್ತಿರವಾದುದೆಂದು ತಮಗೆ ಕಂಡುಬಂದ ಹಸ್ತಪ್ರತಿಯೊಂದರ ಆಧಾರದ ಮೇಲೆ, ತಮ್ಮ ಪರಿಷ್ಕರಣ ವನ್ನು ಸಿದ್ಧಮಾಡಿದುದಾಗಿ ತಿಳಿಸಿದ್ದಾರೆ; ಕ್ವಚಿತ್ತಾಗಿ ಮಾತ್ರ ಪಾಠಭೇದಗಳನ್ನು ಗುರುತಿಸಿದ್ದಾರೆ. ಈವರೆಗೆ ಬಂದ ಪರಿಷ್ಕರಣಗಳನ್ನು ಪರಸ್ಪರವಾಗಿ ಹೋಲಿಸಿ ನೋಡಿ, ಕವಿಪಾಠ ೧೩೪ ಪದ್ಯಗಳಲ್ಲಿ ಅಡಕವಾಗಿದ್ದಿರುವುದು ಸಂಭವವೆಂದು ಸಯುಕ್ತಿಕವಾಗಿ ವಿಚಾರಮಾಡಿದ್ದಾರೆ. ಸಂಪಾದನಕಾರ್ಯದ ಕೌಶಲದಿಂದ ಪದ್ಯಗಳ ಆಶಯ ತಿಳಿಯುವುದು ಸುಲಭವಾಗಿದೆ.

ಈ ಕೃತಿಯ ಇತ್ತೀಚೆಯ ಪರಿಷ್ಕರಣಕರ್ತರು ಡಾ|| ಎಲ್. ಬಸವರಾಜು ಅವರು. ಅವರ 'ಕನ್ನಡ ಛಂದಸ್ಸಂಪುಟ'ದ (೧೯೭೪) ಎರಡನೆಯ ಕೃತಿಯಿದು. ತಮ್ಮ ಪರಿಷ್ಕರಣಕ್ಕೆ ಪ್ರಾಯಃ, ಜಿ. ಎ. ಶಿವಲಿಂಗಯ್ಯ ಎಂಬವರಿಂದ ದೊರೆತ ಹಸ್ತಪ್ರತಿಯನ್ನು ವಿಶೇಷವಾಗಿ ಆಧರಿಸಿರುವಂತೆ ತೋರುವುದು. ಕ್ವಚಿತ್ತಾಗಿ ಮಾತ್ರ ಪಾಠಾಂತರಗಳನ್ನು ಗುರುತಿಸಿದೆ. ಒಂದೊಂದೆಡೆ ವಿಶೇಷ ಟಿಪ್ಪಣಿ ಬರೆಯ ಲಾಗಿದೆ. ತಮ್ಮ ಪರಿಷ್ಕರಣದ ಸಂಪಾದನಸಾಮಗ್ರಿಯನ್ನು ನಿರೂಪಿಸುವಾಗ ಪಂಚಮುಖಿಯವರದು ಅಧಿಕಪಾಠದ ಪರಿಷ್ಕರಣವೆಂದೂ ಕೃಷ್ಣಶಾಸ್ತ್ರಿಗಳದು ನ್ಯೂನಪಾಠದ ಪರಿಷ್ಕರಣವೆಂದೂ ಅವರು ತಿಳಿಸಿ, ಎರಡೂ ದೋಷಯುಕ್ತ ಪರಿಷ್ಕರಣಗಳೆಂದು ಭಾವಿಸಿದ್ದಾರೆ. ಇದು ಎಷ್ಟರಮಟ್ಟಿಗೆ ಸರಿ? ಇದಕ್ಕೆ ಒಂದು ಉದಾಹರಣೆ ಮಾತ್ರ ನೋಡಬಹುದು: ಕವಿ ಹಲವು ಪ್ರಾಸಭೇದಗಳನ್ನು ಹೇಳಿ ದ್ದಾನೆ. ಇವುಗಳಲ್ಲಿ ತಾಂಡವಾದಿ ಪಂಚಪ್ರಾಸಗಳೆಂಬವೂ ಕವಿಪಾಠದೊಳಗಿನವು ಎಂದು ಈ ಪರಿಷ್ಕರಣಕರ್ತರು ತಮ್ಮ ಪ್ರತಿಯ ಆಧಾರದ ಮೇಲೆ ಗ್ರಹಿಸಿದ್ದಾರೆ. ಇವು ಇತರ ಪ್ರತಿಗಳಲ್ಲಿಲ್ಲವೆಂಬುದು ಅವರೇ ಕೊಟ್ಟಿರುವ ಪಟ್ಟಿಕೆಯಿಂದ ತಿಳಿಯು ತ್ತದೆ. ಈ ಕಾರಣದಿಂದ ಈ ಭೇದಗಳನ್ನು ಹೇಳುವ ಪದ್ಯಗಳು ಅನಂತರದ ಅಧಿಕಪಾಠಗಳಾಗಿ ಇತರರಿಂದ ಸೇರಿರಬಹುದು ಎಂದು ಹೇಳಲು ಅವಕಾಶವಿಲ್ಲವೇ? ಈ ಹಿನ್ನೆಲೆಯಲ್ಲಿ ಈ ನ್ಯೂನಪಾಠ ಅಧಿಕಪಾಠಗಳ ವಿಚಾರದಲ್ಲಿ ಪುನರ್ವಿಮರ್ಶೆ ಅಗತ್ಯ ಎನ್ನಬೇಕು.

ಮುಂದೆ ಗಮನಿಸಬೇಕಾದ್ದು ಗುಣಚಂದ್ರನ 'ಛಂದಸ್ಸಾರ' ಎಂಬ ಕೃತಿ ಯನ್ನು. ಎಂ. ಮರಿಯಪ್ಪ ಭಟ್ಟರು ಮದ್ರಾಸು ಎ.ಒ.ಆರ್. ಪತ್ರಿಕೆಯ ಸಂಪು

೭-ಭಾಗ ೨ರಲ್ಲಿ, ೧೯೪೧-೪೨ರಲ್ಲಿ, ಈ ಕೃತಿಯ ಪ್ರಥಮ ಪರಿಷ್ಕರಣವನ್ನು ಹೊರ ತಂದರು. ಮೈಸೂರು ಪ್ರಾಚ್ಯಕೋಶಾಗಾರದ ಒಂದು ಹಸ್ತಪ್ರತಿಯನ್ನು ಆಧರಿಸಿ ಇದನ್ನು ಸಿದ್ಧಪಡಿಸಿದೆ. ಅಡಿಟಿಪ್ಪಣಿಗಳಲ್ಲಿ ಅನ್ಯ ಛಂದೋಗ್ರಂಥಗಳ ಸಂವಾದಿ ವಿಷಯಗಳನ್ನು ಎತ್ತಿಕೊಟ್ಟಿದೆ. ಲಕ್ಷ್ಯಲಕ್ಷಣ ಸಮನ್ವಿತವಾದ ಪದ್ಯಗಳಲ್ಲಿ ಕೆಲವೆಡೆ ಪಾಠಶುದ್ಧಿ ಸಾಲದೆನ್ನಬೇಕು ; ಅಭಿಪ್ರಾಯವಿಶದತೆ ಸಾಧ್ಯವಾಗದೆ ಇದೆ.

ಇದರ ಈಚಿನ ಪರಿಷ್ಕರಣ ಡಾ|| ಎಲ್. ಬಸವರಾಜು ಅವರಿಂದ ಸಿದ್ಧವಾಗಿ, ಅವರ 'ಕನ್ನಡ ಛಂದಸ್ಸಂಪುಟ'ದ (೧೯೭೪) ೩ನೆಯ ಪುಸ್ತಕವಾಗಿ ಅದು ಸೇರಿದೆ. ಮೈಸೂರು ಕನ್ನಡ ಅಧ್ಯಯನ ಸಂಸ್ಥೆಯ ಒಂದೇ ಕಾಗದ ಪ್ರತಿಯನ್ನು ಅವಲಂಬಿಸಿದೆ ಇದು. ಪ್ರಾಯಃ ಮದ್ರಾಸು ಪರಿಷ್ಕರಣಕ್ಕೆ ಮೂಲವಾದ ಪ್ರತಿಯೂ ಇದೇ ಇರಬಹುದು. ಮೇಲಿನ ಪರಿಷ್ಕರಣದ ಗುಣದೋಷಗಳು ಇಲ್ಲಿಯೂ ಕಂಡಬರುತ್ತವೆ. ಗ್ರಂಥಶರೀರದಲ್ಲಿ ಪ್ರಸ್ತಾರ, ಗಣಲಕ್ಷಣ, ಸೂತ್ರಾರ್ಥ ಮತ್ತು ವಿಶೇಷಾಂಶಗಳು ಇವೆಲ್ಲ ಸೇರಿವೆ.

ಕೊನೆಯ ಪ್ರಾಚೀನ ಛಂದೋಗ್ರಂಥ ಎಂದರೆ, ವೀರಭದ್ರಕವಿಯ 'ನಂದಿ ಛಂದೋರ್ಣವ'. ಇದು ಮಂ. ಆ. ರಾಮಾನುಜಯ್ಯಂಗಾರ್ಯರಿಂದ ಮೊದಲ ಸಲ, ೧೯೦೯ರಲ್ಲಿ ಸಂಪಾದಿತವಾಗಿ ಮೈಸೂರಿನಿಂದ ಪ್ರಕಟವಾಗಿದೆ. ತುಂಬ ಅಶುದ್ಧವಾದ ಒಂದು ಅಸಮಗ್ರ ಹಸ್ತಪ್ರತಿಯನ್ನು ಆಧರಿಸಿರುವ ಕಾರಣ ಪರಿಷ್ಕರಣ ಅಸಮಗ್ರವಾಗಿದೆ ; ಪಾಠಕ್ಲೇಶಗಳೂ ಇವೆ. ಸಂಪಾದಕೀಯ ಪಾಠಗಳು ಹೆಚ್ಚಾಗಿರುವಂತೆ ತೋರುವುದು. ಮೊದಲ ಅಡಿಟಿಪ್ಪಣಿಯಲ್ಲಿ ಅಭ್ಯಾಸಿಗಳಿಗೆ ಅನುಕೂಲವಾಗುವಂತೆ 'ವಿವರಣ'ವೆಂಬ ಟಿಪ್ಪಣಿಗಳುಂಟು ; ಎರಡನೆಯ ಅಡಿಟಿಪ್ಪಣಿಯಲ್ಲಿ ಕೆಲವು ಪಾಠಾಂತರಗಳನ್ನು ತೋರಿಸಿದೆ. ಇದಕ್ಕೆ ಆಧಾರ ತಿಳಿಯದು. ಪ್ರಾಯಃ ತಮ್ಮ ಪ್ರಕಟನಾಲಯದ ಕಛೇರಿಯಲ್ಲಿಯೇ ಇದ್ದ ಇನ್ನೊಂದು ಪ್ರತಿಯು ಆಧಾರವಾಗಿರಬಹುದು. ಗ್ರಂಥದ ಆದಿಭಾಗದಲ್ಲಿ ಬಹ್ವಂಶ ಗದ್ಯದಲ್ಲಿದ್ದು, ಅನ್ಯಕರ್ತೃಕವೇ ಇರಬಹುದು.

ಈ ಕೃತಿಯ ಮುಂದಿನ ಪರಿಷ್ಕರಣವನ್ನು ಡಾ|| ಎಲ್. ಬಸವರಾಜು ಪ್ರಕಟಿಸಿದ್ದಾರೆ. ಇದು ಅವರ 'ಕನ್ನಡ ಛಂದಸ್ಸಂಪುಟ'ದ (೧೯೭೪) ೪ನೆಯ ಪುಸ್ತಕ. ಸಮಗ್ರ ಗ್ರಂಥವನ್ನು ಪ್ರಕಟಿಸಿರುವ ಯಶಸ್ಸು ಅವರದಾಗಿದೆ. ಇದರಿಂದ ಗ್ರಂಥಕರ್ತೃತ್ವ ಮೊದಲಾದ ವಿಚಾರಗಳೂ ಸ್ಪಷ್ಟಪಡುವುದು ಸಾಧ್ಯವಾಗಿದೆ. ಧಾರವಾಡದ ಕನ್ನಡ ಸಂಶೋಧನ ಸಂಸ್ಥೆಯ ಒಂದು ಕಾಗದ ಪ್ರತಿಯ ಆಧಾರದ ಮೇಲೆ ಮತ್ತು ಈ ಗ್ರಂಥದ ಕರ್ತೃ ಅನುಸರಿಸಿರುವನೆಂದು ತಾವು ತಿಳಿದ 'ಅಪ್ಪಕವೀಯ' ಮೊದಲಾದ ತೆಲುಗು ಛಂದೋಗ್ರಂಥಗಳ ಸಹಾಯದಿಂದ ತಾವು ತಮ್ಮ ಪರಿಷ್ಕರಣವನ್ನು ಸಿದ್ಧಪಡಿಸಿರುವುದಾಗಿ ಅವರು ತಿಳಿಸಿದ್ದಾರೆ. ಪ್ರಸ್ತಾರದೊಂದಿಗೆ ಗ್ರಂಥಪಾಠವನ್ನು ಮುದ್ರಿಸಿದ್ದಾರೆ. ಮೈಸೂರು ಮತ್ತು ಧಾರವಾಡದ ಪ್ರತಿಗಳೊಳಗಿನ ಸಾದೃಶ್ಯ

ವೈದೃಶ್ಯಗಳನ್ನೂ ಕನ್ನಡ ಸಂಸ್ಕೃತ ಛಂದೋಗ್ರಂಥಗಳೊಂದಿಗೆ ಹೋಲಿಸಿದ್ದ ಕಂಡುಬರುವ ವ್ಯತ್ಯಾಸಗಳನ್ನೂ ಇತರ ವಿಶೇಷಾಂಶಗಳನ್ನೂ ಹಲವ 'ವಿಶೇಷ'ವೆಂಬ ಸೂಚನೆಯೊಂದಿಗೆ ತೋರಿಸಿದ್ದಾರೆ.

ಷಟ್ಪದಿ ಮೊದಲಾದ ಭಾಗಗಳಲ್ಲಿ ಕ್ಲೇಶಗಳಿವೆ. ಅಲ್ಲಲ್ಲಿ ಲಿಪಿಕಾರ ಸ್ಖಾಲಿತ್ಯ ಗಳನ್ನು ತಿದ್ದದೆ ಬಿಟ್ಟಿದೆ. ಎಷ್ಟೋ ವೇಳೆ ಲಿಪಿಕಾರಸ್ಖಾಲಿತ್ಯ ಹೇಗೆ ಭ್ರಾಂ ಯುಂಟುಮಾಡಬಹುದು ಎನ್ನುವುದಕ್ಕೆ ಒಂದು ಉದಾಹರಣೆಯನ್ನಿಲ್ಲಿ ಕೊ ಬಹುದು : ಬೃಹತಿ ಛಂದಸ್ಸಿನ 'ಭುಜಗಶಿಶುಸೃತ' ಇಲ್ಲಿ 'ಭುಜಗಶಶರುತು' ಎಂದ ಗಿದೆ. ಈ ಹೆಸರಿನ ವೃತ್ತ ಬೇರೆ ಛಂದೋಗ್ರಂಥಗಳಲ್ಲಿಲ್ಲ ಎನ್ನುವುದರಿಂದ ಇ ಸ್ಖಲಿತರೂಪ ಎಂದು ನಿರ್ಧರಿಸಬಹುದು. ಇಲ್ಲಿಯಾದರೂ ವೀರಭದ್ರಕವಿ ನನ ಗಣಗಳ ವೃತ್ತವನ್ನು ನನಯ ಗಣಗಳ ವೃತ್ತವೆಂದು ತಾನೇ ತಪ್ಪಾಗಿ ತಿಳಿದಿರುವುದ ಇನ್ನೊಂದು ಸ್ವಾರಸ್ಯ. ಇನ್ನೊಂದು ಉದಾಹರಣೆ : ಉಷ್ಣಿಕ್ ಛಂದಸ್ಸಿ ೨ನೆಯ ವೃತ್ತ ವಿತಾನವೋ, ವಿಶಾಳವೋ ? ಅಥವಾ ವಿತಾಳವೋ ? ಇದನ್ನು ನಿರ್ಣಯಿಸುವಲ್ಲಿ ತೊಡಕುಗಳಿವೆ. ಸಂಸ್ಕೃತದಲ್ಲಿ ಈ ವೃತ್ತವಿಲ್ಲ. 'ಛಂದೋಂಬುಧಿ' ಯಲ್ಲಿ ಈ ವೃತ್ತದ ಹೆಸರು ವಿಶಾಲ, ವಿಚಿತ್ರ, ವಿತಾನ ಎಂದು ಮೂರು ಪಾಠಗಳಲ್ಲಿದೆ. 'ನಂದಿಛಂದೋರ್ಣವ'ದಲ್ಲಿ ವಿತಾನ, ವಿತಾಳ ಎಂಬುದಾಗಿ ಎರಡು ಪಾಠಗಳಿವೆ. ಲಿಪಿಕಾರಸ್ಖಾಲಿತ್ಯ ಇಲ್ಲಿ ತನ್ನ ಕೈವಾಡ ತೋರಿದ್ದರಿಂದ ತೊಡಕು ಹುಟ್ಟಿದೆ: ಪರಿಹಾರ ಸುಲಭವಲ್ಲ.

ಈವರೆಗೆ ಕನ್ನಡ ಛಂದೋಗ್ರಂಥಗಳ ಒಂದೊಂದೂ ಪರಿಷ್ಕರಣದ ಒಂದು ಸಾಮಾನ್ಯ ಪರಿಚಯವನ್ನು ಮಾಡಿಕೊಂಡು ಆಯಿತು. ಬಹುಸಂಖ್ಯೆಯ ಪ್ರತಿಗ ಅವಲಂಬನೆಯಿಂದ ಸಂಪಾದಿತವಾಗಿರುವ 'ಛಂದೋಂಬುಧಿ', 'ಕವಿಜಿಹ್ವಾಬಂಧನ' ಇವುಗಳ ವಿಷಯದಲ್ಲಿ ಪರಿಷ್ಕರಣದಿಂದ ಪರಿಷ್ಕರಣಕ್ಕೆ ಅಧಿಕವೂ ಗಮನಾರ್ಹವೂ ಆದ ಪಾಠಸಮಸ್ಯೆಗಳೂ ಇತರ ಅನೇಕ ವಿಧದ ಕ್ಲೇಶಗಳೂ ಸಂಶಯಗಳೂ ಹೆಚ್ಚುತ್ತಾ ಹೋಗಿವೆ. ಇದಕ್ಕೆ ಉದಾಹರಣೆಗಳನ್ನು ಕೊಡುವುದು ಸುಲಭ. ಇಂತಹ ಇಕ್ಕಟ್ಟುಗಳಲ್ಲಿ ಅಭ್ಯಾಸಿ ತುಂಬ ಪಾಡುಪಡಬೇಕಾಗುತ್ತದೆ. ಯಾವ ಸಂಪಾದ ನನ್ನು ನಂಬಬೇಕು ? ಯಾವ ಪರಿಷ್ಕರಣವನ್ನು ಅಧಿಕೃತವಾಗಿ ಹಿಡಿಯಬೇಕು? ಸದ್ಯಕ್ಕೆ 'ಛಂದೋಂಬುಧಿ' ಯಂತಹ ಪ್ರಮುಖ ಛಂದೋಗ್ರಂಥಕ್ಕಂತೂ ಉತ್ತಮ ಪರಿಷ್ಕರಣದ ಆವಶ್ಯಕತೆಯಿರುವುದು ನಿಶ್ಚಯ.

ಇಲ್ಲಿ ಕೆಲವು ಸಾಮಾನ್ಯ ಸೂಚನೆಗಳನ್ನು ಕೊಡಬಹುದು :

(೧) ಗ್ರಂಥಸಂಪಾದನ ಶಾಸ್ತ್ರದ ವಿಧಿಗಳಿಗೆ ಅನುಸಾರವಾಗಿ ಹಸ್ತಪ್ರತಿಗ ಸಂಗ್ರಹ, ಪಾಠಸಂಕಲನ, ಸಂಪ್ರದಾಯಗಳ ವಿಭಜನೆ, ಪೀಳಿಗೆಯ ರಚನೆ ಇತ್ಯಾ ಗಳನ್ನು ನಿಷ್ಠೆಯಿಂದಲೂ ನಿಷ್ಠುರವಾಗಿಯೂ ಅನ್ವಯಿಸಿದರೆ ಪಾಠನಿಷ್ಕರ್ಷೆಗೆ ಹೊ ಬಲ ಬರುವುದು ಬಹುಮಟ್ಟಿಗೆ ಸಾಧ್ಯ. ಕೆಲವು ವೇಳೆ ಅದು ಸಾಧ್ಯವಿಲ್ಲವಾದ

ಅಗತ್ಯವಾದಷ್ಟುಮಟ್ಟಿಗೆ ಆ ವಿಧಿಗಳನ್ನು ಅನ್ವಯಿಸಿ, ಇರುವುದರಲ್ಲಿ ಉತ್ತಮವಾದ ಒಂದು ತಾತ್ಕಾಲಿಕ ಪರಿಷ್ಕರಣವನ್ನು ಹೊರತರಬೇಕಾಗುತ್ತದೆ.

ನನಗೆ ತಿಳಿದಮಟ್ಟಿಗೆ, ಸಂಸ್ಕೃತ ಪ್ರಾಕೃತ ಛಂದೋಗ್ರಂಥಗಳ ಸಂಪಾದನೆಯಲ್ಲಿ ಎಚ್. ಡಿ. ವೇಲಣಕರ ಮೊದಲಾದವರು ಸಹ ಈ ಶಾಸ್ತ್ರದ ವಿಧಿಗಳನ್ನು ಯಥಾವತ್ತಾಗಿ ಅನುಸರಿಸಿರುವಂತೆ ತೋರುವುದಿಲ್ಲ. ದೊರೆತ ಪ್ರತಿಗಳಲ್ಲಿ ತೃಪ್ತಿಕರವಾಗಿ ತೋರಿದ ಒಂದನ್ನು ಆಧಾರಪ್ರತಿಯಾಗಿಟ್ಟುಕೊಂಡು, ಇತರ ಪ್ರತಿಗಳ ಪಾಠಾಂತರಗಳನ್ನು ಅಡಿಟಿಪ್ಪಣಿಗಳಲ್ಲಿ ತೋರಿಸಿರುವುದು ಕಾಣುತ್ತದೆ. ಇಲ್ಲಿಯೇ ಆಗಾಗ ಪಾಠಸಮಸ್ಯೆಗಳ ವಿಮರ್ಶೆಯನ್ನೂ ಸ್ವಂತ ಸೂಚನೆಗಳನ್ನೂ ಬಹುಸಂಕ್ಷೇಪವಾಗಿ ಮಾತ್ರ ಮಾಡಿರುವುದನ್ನು ಗಮನಿಸಬಹುದು.

ಪ್ರತಿಗಳ ಸಂಖ್ಯೆ ಹೆಚ್ಚಾಗಿದ್ದು, ನಾನಾ ಕಾರಣಗಳಿಂದ ಅವುಗಳಲ್ಲಿ ಪಾಠವ್ಯತ್ಯಾಸಗಳೂ ಪಾಠದ ನ್ಯೂನಾಧಿಕ್ಯಗಳೂ ಹೆಚ್ಚಾಗಿ ಕಂಡುಬಂದರೆ, ಕವಿಪಾಠವನ್ನು ಹೊಸ ಪ್ರಯತ್ನಗಳ ಮೂಲಕವಾಗಿ ಶ್ರಮಪಟ್ಟು ಶೋಧಿಸಬೇಕಾಗುತ್ತದೆ. ಅಗತ್ಯವಾದ ಮಟ್ಟಿಗೆ ಈ ಶಾಸ್ತ್ರದ ವಿಧಿಗಳನ್ನು ಅನ್ವಯಿಸಿ ಸುಬೋಧವಾದ ತಾತ್ಕಾಲಿಕ ಪರಿಷ್ಕರಣವನ್ನು ಸಿದ್ಧಪಡಿಸಿಯಾದರೂ ತೃಪ್ತಿಗೊಳ್ಳಬೇಕಾಗುತ್ತದೆ.

(೨) ಉತ್ತಮ ಸಂಪಾದನೆಯ ಪ್ರಯತ್ನಗಳಲ್ಲಿ ಸಂಪಾದಕನ ವ್ಯುತ್ಪತ್ತಿಯ ಪಾತ್ರ ಬಹು ದೊಡ್ಡದು. ಇದು ಹಾರ್ದವಾದ ಹಳಗನ್ನಡ ಭಾಷಾಜ್ಞಾನದಿಂದಲೂ ಸಂಬಂಧಪಟ್ಟ ಶಾಸ್ತ್ರದ ತಲಸ್ಪರ್ಶಿಯಾದ ಅಧ್ಯಯನದಿಂದಲೂ ಲಭ್ಯವಾಗತಕ್ಕದ್ದಾಗಿದೆ. ಪ್ರಸ್ತುತ ಶಾಖೆಗೆ ಸಂಬಂಧಿಸಿದಂತೆ ಸಂಸ್ಕೃತ ಪ್ರಾಕೃತಾದಿಗಳ ಅನ್ಯದ್ರಾವಿಡಭಾಷೆಗಳ ಛಂದೋರೂಪಗಳ ಹಾಗೂ ಛಂದೋಗ್ರಂಥಗಳ ಅಭ್ಯಾಸ, ಅರಿವು ಅತ್ಯವಶ್ಯವಾದವು. ಲಿಪಿಯಲ್ಲಿ, ಕನ್ನಡ ಭಾಷೆಯ ಛಂದೋರೂಪಗಳಲ್ಲಿ ಕಾಲಕಾಲಕ್ಕೆ ತಲೆದೋರಿದ ಎಲ್ಲ ರೀತಿಯ ಬೆಳವಣಿಗೆಗಳನ್ನೂ ಐತಿಹಾಸಿಕವಾಗಿ ತಿಳಿದಿರಬೇಕಾದ್ದೂ ಅವಶ್ಯ. ಹಳಗನ್ನಡದ ವ್ಯಾಕರಣ, ನುಡಿಗಟ್ಟು, ವಾಕ್ಯರಚನೆ, ಕಾಲಕಾಲದ ಶೈಥಿಲ್ಯಪ್ರವೃತ್ತಿಗಳು ಇವುಗಳ ಖಚಿತವಾದ ತಿಳಿವಳಿಕೆ ಅಪೇಕ್ಷಣೀಯ. ಈ ಸಿದ್ಧತೆಯಿದ್ದುದಾದರೆ ಕವಿಪಾಠನಿರ್ಣಯದಲ್ಲಿ ಲೋಪಪ್ರಕ್ಷೇಪಾದಿಗಳು ಸ್ಪಷ್ಟವಾಗುತ್ತವೆ; ಅಂತಸ್ಸಂಭಾವ್ಯತೆ, ಲಿಪಿಕಾರಲೇಖನಸಂಭಾವ್ಯತೆ, ಬಾಹ್ಯಸಾಕ್ಷ್ಯಗಳ ನೆರವು, ಕಠಿನಪಾಠಗಳ ಸ್ವೀಕಾರ ಇತ್ಯಾದಿಗಳೆಲ್ಲ ಕಾರ್ಯಪ್ರವೃತ್ತವಾಗುವುದು ಸುಲಭವಾಗುತ್ತದೆ.

(೩) ಅಭ್ಯಾಸಿಗಳಿಗೆ ಗ್ರಂಥವಿಷಯ ವಿಶದವಾಗಲೆಂದು ಸಂಕಲ್ಪಿಸಿ, ಆ ಕಾರಣಕ್ಕಾಗಿ ಬಗೆಬಗೆಯ ಸೂಚನೆ, ಸಂಕೇತ, ಚಿಹ್ನೆ, ಶೀರ್ಷಿಕೆ, ಪ್ರಸ್ತಾರ, ಟಿಪ್ಪಣಿ, ವಿವರಣೆ, ವಿಶೇಷಾಂಶ ಮುಂತಾದುವನ್ನು ನಮ್ಮ ಛಂದೋಗ್ರಂಥಗಳ ಸಂಸ್ಕರಣಗಳಲ್ಲೆಲ್ಲ ಸಾಮಾನ್ಯವಾಗಿ ಕೊಟ್ಟಿರುವುದು ಕಾಣುತ್ತದೆ. ಆದರೆ ಇದು ಖಂಡಿತವಾಗಿ ಸರಿಯಲ್ಲ. ಕವಿಪಾಠದ ಜೊತೆಗೆ ಯಾವುದೇ ಗಾತ್ರದ ಅಕ್ಷರಗಳಲ್ಲಿ

ಅವನ್ನು ತೋರಿಸುವುದೂ ನಿರೂಪಿಸುವುದೂ ಸರಿಯಲ್ಲ. ಕವಿ ತನ್ನ ಗ್ರಂಥವನ್ನು ಯಾವ ರೂಪದಲ್ಲಿ ಬರೆದು ಸಿದ್ಧಪಡಿಸಿದನೋ, ಅದೇ ರೂಪದಲ್ಲಿ ಅದನ್ನು ಪ್ರಕಟಿಸಬೇಕು; ಹಸ್ತಪ್ರತಿಗಳ ಆಧಾರದಿಂದ ಸಂಪಾದಿಸಿ ಹಾಗೆ ಪ್ರಕಟಿಸುವುದು ನಮ್ಮ ಕರ್ತವ್ಯವಾಗಬೇಕು. ಬೇಕಾದರೆ, ವೃತ್ತನಾಮಗಳನ್ನು, ಆಯಾ ಪದ್ಯಭಾಗಗಳೊಳಗೇ ಅವು ಬಂದಿದ್ದ ಪಕ್ಷದಲ್ಲಿ, ದಪ್ಪಕ್ಷರಗಳಲ್ಲಿ ಮುದ್ರಿಸಿ ತೋರಿಸಬಹುದು; ಪದ್ಯಸಂಖ್ಯೆಯನ್ನು ಅನುಕ್ರಮವಾಗಿ ಕೊಡಬಹುದು.

(೪) ಕವಿಪಾಠವಷ್ಟೇ ಮುಖ್ಯ ಗ್ರಂಥವಾಗಿರಬೇಕು. ವೃತ್ತಿಯೋ ಟೀಕೆಯೋ ಕವಿರಚಿತವಾದುದಾಗಿದ್ದರೆ ಅದೂ ಮುಖ್ಯಗ್ರಂಥವಾಗಿಯೇ ಸ್ಥಾನ ಪಡೆಯುತ್ತದೆ. ಬೇರೆ ಕವಿಯದಾಗಿದ್ದರೆ, ಅಡಿಟಪ್ಪಣಿಯ ಮೊದಲ ಖಾನೆಯಲ್ಲಿ ಅದೂ ಕ್ರಮಬದ್ಧವಾಗಿ ಸಂಪಾದಿತವಾಗಿ ಪ್ರಕಟವಾಗಬಹುದು. ಆದರಿಂದ ಕೆಳಗಿನ ಎರಡನೆಯ ಖಾನೆಯಲ್ಲಿ ವಿಷಯ ಪ್ರಾಮುಖ್ಯವುಳ್ಳ ಮುಖ್ಯ ಪಾಠಭೇದಗಳನ್ನು ಮಾತ್ರ ಕೊಟ್ಟರೆ ಸಾಕು, ಅಕ್ಷರಸ್ಖಾಲಿತ್ಯದ ರೂಪಗಳನ್ನೆಲ್ಲ ಪಾಠಭೇದಗಳಾಗಿ ತೋರಿಸುವುದು ಅನಾವಶ್ಯಕ. ಮುಖ್ಯ ಪಾಠಭೇದಗಳನ್ನು ಸೂಚಿಸುವಾಗ ಆಗತ್ಯವೆಂದು ಕಂಡರೆ, ತುಂಬ ಸಂಕ್ಷೇಪವಾಗಿ ಪಾಠಸಮಸ್ಯೆಗಳನ್ನು ವಿಮರ್ಶಿಸಬಹುದು, ಸಂಶಯ ತಿದ್ದುಪಡಿ ಮೊದಲಾದವನ್ನು ಸೂಚಿಸಬಹುದು; ಪಾಠನ್ಯೂನಾಧಿಕ್ಯ ಆನುಪೂರ್ವಿ ಮೊದಲಾದುವನ್ನೂ ವಿಮರ್ಶಿಸಬಹುದು. ಆದರೆ ಇ[illegible] ದೊಡ್ಡ ಚರ್ಚೆಗಳ ರೂಪದಲ್ಲಿರಬಾರದು, ಹೊರೆಯಾಗಬಾರದು. ಇಂಥ [illegible] ಸಂಪಾದಕನ ವ್ಯುತ್ಪತ್ತಿ ಸಂಯಮಗಳ ಶಕ್ತಿವ್ಯಾಪ್ತಿಗಳನ್ನು ಅವಲಂಬಿಸಿರುತ್ತದೆ ಸಂಕ್ಷೇಪಗುಣ.

ಪಾಠಸಮಸ್ಯೆಗಳೂ ನ್ಯೂನಾಧಿಕ್ಯಗಳೂ ಆನುಪೂರ್ವಿಯ ವ್ಯತ್ಯಾಸಗಳು ಬಹಳವಾಗಿದ್ದ ಪಕ್ಷದಲ್ಲಿ, ಅವನ್ನು ಪರಿಶಿಷ್ಟದಲ್ಲಿ ಸ್ವಲ್ಪ ವಿವರವಾಗಿ ನಿರೂಪಿಸಬಹುದು; ವಿಮರ್ಶಿಸಲೂ ಬಹುದು. ಆದರೆ ಸಮರ್ಥವಾದ ವಿವೇಚನೆಯಿಂ[illegible] ಕವಿಯದಲ್ಲವೆಂದು ನಿರ್ಣಯ ಸಾಧ್ಯವಾಗಬಹುದಾದ ಪ್ರಕ್ಷೇಪಾದಿಗಳ ವಿಚಾರದಲ್ಲಿ, ಕಾಲೋಚಿತವಲ್ಲದ ಅಧಿಕಪಾಠಗಳ ವಿಚಾರದಲ್ಲಿ, ಈ ನಿರೂಪಣೆ, ವಿಮರ್ಶೆ ಅಗತ್ಯವಿಲ್ಲ; ಅಂಥವನ್ನೆಲ್ಲಾ ನಿರ್ದಾಕ್ಷಿಣ್ಯವಾಗಿ ಕೈಬಿಡಬೇಕು. ಗ್ರಂಥ ಅನುಪಯುಕ್ತ ಸಾಮಗ್ರಿಗಳ ಹೊರೆಯಿಂದ ಮುಕ್ತವಾಗುತ್ತದೆ, ಆಗ.

(೫) ಗ್ರಂಥಪಾಠ ಶುದ್ಧವಾಗಿರಬೇಕಾದ್ದು ಅಗತ್ಯ. ತತ್ಕಾಲದ ಭಾಷೆ ಆ ಗ್ರಂಥಕರ್ತೃವಿನ ಶೈಲಿಯ ವ್ಯಕ್ತಿವೈಲಕ್ಷಣ್ಯಗಳು ಇವನ್ನೆಲ್ಲ ಮನ್ನಿಸಿ, [illegible] ಕಾರ ಸ್ಖಾಲಿತ್ಯಗಳನ್ನೆಲ್ಲ ಸಲಕ್ಷಣವಾಗುವಂತೆ ತಿದ್ದಿಯೇ ಗ್ರಂಥವನ್ನು ಪ್ರಕಟಿಸುವುದು ತುಂಬ ಅಪೇಕ್ಷಣೀಯವಾದ್ದು. ಹೀಗೆಯೇ 'ಱ' ಮತ್ತು 'ೞ' ಈ ಅಕ್ಷರಗಳನ್ನು ಬಳಸಿರುವ ಪದಗಳಲ್ಲಿ ತಪ್ಪುಗಳಿದ್ದರೆ ಅವನ್ನು ಸರಿಪಡಿಸಿ, ಆ ಅಕ್ಷರಗಳನ್ನು ಬಳಸದಿದ್ದಲ್ಲಿ ಅವನ್ನು ಸಂಯೋಜಿಸಿ, ಶಬ್ದರೂಪಗಳನ್ನು ಕೊಡಬೇಕಾ[illegible]

ತ್ತದೆ. ಇದು ಗ್ರಂಥಗಳ ಪ್ರಾಚೀನತೆಗೆ ಅನುಸಾರವಾಗಿ, ಆ ಅಕ್ಷರಗಳ ಬಳಕೆಯ ಕಾಲವ್ಯಾಪ್ತಿಗೆ ಅನುಸಾರವಾಗಿ ಇರುತ್ತದೆಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

(೬) ಸಂಪಾದಿತ ಕೃತಿಯಲ್ಲಿ, ಮೊದಲಿಗೆ ಕವಿ ವಿಚಾರ, ವಸ್ತುವಿಶ್ಲೇಷಣೆ, ಗ್ರಂಥಪ್ರಯೋಜನ ಮತ್ತು ಪಾಠಸಾಮಗ್ರಿ ಈ ವಿವರಗಳು ಮಾತ್ರವೇ ಇರುವುದು ಒಳ್ಳೆಯದೆಂದು ತೋರುತ್ತದೆ. ಹಾಗೆಯೇ ಪರಿಶಿಷ್ಟಭಾಗದಲ್ಲಿ, ಪ್ರತಿಯೊಂದು ಸೂತ್ರದ ಅಥವಾ ಪದ್ಯಗದ್ಯಗಳ ತಾತ್ಪರ್ಯವನ್ನು ಹೊಸಗನ್ನಡ ಗದ್ಯದಲ್ಲಿ ಸುಲಭವಾಗಿ ನಿರೂಪಿಸುವುದು ಅಪೇಕ್ಷಣೀಯವಾದ್ದು. ಎಚ್.ಡಿ. ವೇಲಣಕರ ಅವರು ತಾವು ಸಂಪಾದಿಸಿರುವ ಗ್ರಂಥಗಳಿಗೆ ಹಾಗೆ ಮಾಡಿರುವುದು ನಮಗೆ ಮಾದರಿಯಾಗಿದೆ ಎನ್ನಬಹುದು. ವಿಶೇಷಾಂಶಗಳನ್ನು ಕುರಿತ ಲಘುಟಿಪ್ಪಣಿಗಳನ್ನು ಮೊದಲ ಪರಿಶಿಷ್ಟದಲ್ಲಿಯೇ ಪ್ರತ್ಯೇಕವಾಗಿಯೋ, ಬೇರೆಯೇ ಒಂದು ಪರಿಶಿಷ್ಟದಲ್ಲಿಯೋ ಒದಗಿಸಬಹುದು. ಪಾರಿಭಾಷಿಕ ಪದಗಳು, ವೃತ್ತನಾಮಗಳು ಇವನ್ನು ಹೇಳುವ ಪ್ರತ್ಯೇಕ ಪದಸೂಚಿಗಳ ಒಂದೆರಡು ಪರಿಶಿಷ್ಟಗಳು ಆಗತ್ಯವಾಗಿ ಇರಬೇಕಾದುವೇ. ಇತರ ವಿಷಯಗಳಿಂದ ಈ ಗ್ರಂಥಾಂತ್ಯಭಾಗದ ಪರಿಶಿಷ್ಟಗಳನ್ನು ಬೆಳಸುವುದು ಪ್ರಾಯಃ ಅನಾವಶ್ಯಕ.

೩

## ಕನ್ನಡ ಅಲಂಕಾರ ಶಾಸ್ತ್ರಗ್ರಂಥಗಳು

ಕನ್ನಡ ಅಲಂಕಾರ ಶಾಸ್ತ್ರಗ್ರಂಥಗಳಲ್ಲಿ, ಪ್ರಾಚೀನವಾದವುಗಳಲ್ಲಿ, 'ಕವಿರಾಜಮಾರ್ಗ' (ಸು. ೮೫೦), 'ಕಾವ್ಯಾವಲೋಕನ' (೧೦೪೨), 'ಉದಯಾದಿತ್ಯಾಲಂಕಾರ' (ಸು. ೧೧೫೦), 'ಶೃಂಗಾರ ರತ್ನಾಕರ' (ಸು. ೧೨೦೦), 'ಮಾಧವಾಲಂಕಾರ' (ಸು. ೧೫೦೦), 'ರಸರತ್ನಾಕರ' ಮತ್ತು 'ಶಾರದಾವಿಲಾಸ' ಗಳು (ಸು. ೧೫೫೦), 'ಅಪ್ರತಿಮ ವೀರಚರಿತೆ' (ಸು. ೧೬೪೫), 'ಕುವಲಯಾನಂದ' (ಸು. ೧೭೫೦), 'ನರಪತಿ ವಿಜಯ' (೧೮೬೨) ಇವು ಪ್ರಕಟವಾಗಿದ್ದು, ತಿಮ್ಮನ 'ನವರಸಾಲಂಕಾರ' (ಸು. ೧೬೦೦), ಜಾಯೇಂದ್ರನ 'ಶೃಂಗಾರತಿಲಕ' ಇವು ಇನ್ನೂ ಪ್ರಕಟವಾಗಬೇಕಾಗಿವೆ.

ಇವುಗಳ ಪರಿಷ್ಕರಣಗಳ ಬಗೆಗೆ ಈ ಮುಂದೆ ಒಂದು ಸಾಮಾನ್ಯ ಪರಿಚಯವನ್ನು ಕೊಡಬಹುದು.

ಮೊದಲನೆಯದು 'ಕವಿರಾಜಮಾರ್ಗ'. ಇದರ ಮೊದಲ ಪರಿಷ್ಕರಣ ಬಿಬ್ಲಿಯೋಥಕಾ ಕರ್ನಾಟಿಕದ ಪ್ರಕಟನೆಯಾಗಿ, ೧೮೯೮ರಲ್ಲಿ, ಬೆಂಗಳೂರಿಂದ

ಹೊರಬಂದಿತು ; ಪರಿಷ್ಕರಣಕರ್ತರು ಕೆ.ಬಿ. ಪಾಠಕ್ ಅವರು. ಇವರು ಕರ್ಣಾಟಕ ಕಾವ್ಯಮಂಜರಿಯ ಸಂಪಾದಕರ ಮೂಲಕ ದೊರೆತ ೨ ಹಸ್ತಪ್ರತಿಗಳನ್ನೂ ಮದ್ರಾಸು ಸರ್ಕಾರದ ಪ್ರಾಚ್ಯ ಸಂಶೋಧನಾಲಯದ ಒಂದು ಹಸ್ತಪ್ರತಿಯನ್ನೂ ಉಪಯೋಗಿಸಿ, ಪರಿಷ್ಕರಣವನ್ನು ಸಿದ್ಧಪಡಿಸಿದ್ದಾರೆ. ಮೊದಲನೆಯ ಪ್ರತಿ (A) ಅಸಮಗ್ರವೂ ಅಶುದ್ಧವೂ ಆದುದು, ಎರಡನೆಯದು (B) ಸಮಗ್ರವಾದರೂ ಅಶುದ್ಧವಾದುದು, ಮೂರನೆಯದು (C) ಉಳಿದೆರಡಕ್ಕಿಂತ ಉತ್ತಮವಾದುದಾದರೂ ಅಸಮಗ್ರವಾದುದು. ಇವುಗಳಿಂದ ಒಂದು ಸಮ್ಮಿಶ್ರಪ್ರತಿಯನ್ನು ಸಿದ್ಧಪಡಿಸಿದೆ ಎಂದು ಪರಿಶೀಲನೆಯಿಂದ ತಿಳಿಯಬಹುದಾಗಿದೆ. ಮೊದಲಿಗೆ ಕವಿಪಾಠ ರೋಮನ್ ಲಿಪಿಯಲ್ಲಿಯೂ ಆಮೇಲೆ ಕನ್ನಡ ಲಿಪಿಯಲ್ಲಿಯೂ ಇದೆ. ಕವಿ ಕೃತಿ ವಿಚಾರದ ಇಂಗ್ಲಿಷ್ ಉಪೋದ್ಘಾತವನ್ನು ಮಾತ್ರ ಆರಂಭದಲ್ಲಿ ಕೊಟ್ಟಿದೆ.

ಎರಡನೆಯ ಪರಿಷ್ಕರಣವನ್ನು ಎ. ವೆಂಕಟರಾವ್ ಮತ್ತು ಎಚ್. ಶೇಷ ಅಯ್ಯಂಗಾರ್ಯರು ಸಿದ್ಧಪಡಿಸಿದ್ದು, ಅದು ೧೯೩೦ರಲ್ಲಿ ಮದ್ರಾಸು ವಿಶ್ವವಿದ್ಯಾನಿಲಯದ ಪ್ರಾಚ್ಯಕೋಶಾಗಾರದ ಮೂಲಕ ಹೊರಬಂದಿದೆ ; ೧೯೫೩ರಲ್ಲಿ ಇದರ ಪುನರ್ಮುದ್ರಣವೂ ಆಗಿದೆ. ಈ ಪ್ರತಿಯ ಶೋಧನೆಗೆ, ಕೆ.ಬಿ. ಪಾಠಕರ ಪರಿಷ್ಕರಣವೂ ಮದ್ರಾಸು ಪ್ರಾಚ್ಯಕೋಶಾಗಾರದ ಒಂದು ಓಲೆಪ್ರತಿಯೂ ಮೈಸೂರು ಪ್ರಾಚ್ಯಕೋಶಾಗಾರದ ಎರಡು ಪ್ರತಿಗಳೂ ಒದಗಿರುವ ಹಾಗೆ ತಿಳಿಯುವುದು. ಇವುಗಳಲ್ಲಿ ಅತ್ಯುತ್ತಮವಾದುದು ಯಾವುದು, ಯಾವುದನ್ನು ಆಧಾರಪ್ರತಿಯಾಗಿರಿಸಿಕೊಂಡಿದೆ, ಬೇರೆ ಪ್ರತಿಗಳ ಪಾಠಭೇದಗಳು ಯಾವುವು, ಇವುಗಳನ್ನು ಏಕೋ ತಿಳಿಸಿಲ್ಲ. ಪಾಠಭೇದಗಳನ್ನು ಅಡಿಟಿಪ್ಪಣಿಗಳಲ್ಲಿ ಕೊಡದೆ, ಗ್ರಂಥಾಂತ್ಯದ ಎರಡನೆಯ ಪರಿಶಿಷ್ಟದಲ್ಲಿ ತೋರಿಸಿದೆ. ಹೀಗೆ ತೋರಿಸಿರುವ ಪಾಠಭೇದಗಳು ಮೈಸೂರು ಪ್ರಾಚ್ಯಕೋಶಾಗಾರದ ಎರಡು ಹಸ್ತಪ್ರತಿಗಳಲ್ಲಿ ಮಾತ್ರ ಕಂಡು ಬರತಕ್ಕವಾಗಿವೆ. ಇನ್ನು ಅಡಿಟಿಪ್ಪಣಿಗಳಲ್ಲಿ ವಿಶೇಷ ವಿಷಯಗಳಾಗಿ 'ಶಬ್ದಮಣಿದರ್ಪಣ'ದಲ್ಲಿ 'ಕವಿರಾಜಮಾರ್ಗ'ದ ಯಾವ ಪದ್ಯ ಉದ್ಧೃತವಾಗಿದೆ, ಪದ್ಯದ ಛಂದಸ್ಸಿನ ಸಮಸ್ಯೆಗಳು, ದಂಡಿ ಭಾಮಹರ ಗ್ರಂಥಭಾಗಗಳ ಸಾದೃಶ್ಯ ವೈದೃಶ್ಯಗಳು, ಲಕ್ಷಣ-ಲಕ್ಷ್ಯಪದಗಳ ಆನುಪೂರ್ವಿ, ಲಕ್ಷ್ಯಸಮನ್ವಯದ ಸಮಸ್ಯೆ, ಪ್ರಕ್ಷೇಪ, ಪ್ರತಿಕಾರಸ್ಖಾಲಿತ್ಯ, ವ್ಯಾಕರಣವೈಚಿತ್ರ್ಯ ಮೊದಲಾದವು—ಇವನ್ನೆಲ್ಲ ಕುರಿತ ಹಾಗೆ ಸಣ್ಣ ಸಣ್ಣ ಟಿಪ್ಪಣಿಯ ವಾಕ್ಯಗಳಿವೆ.

ಗ್ರಂಥದ ಕರ್ತೃ ಮತ್ತು ವಸ್ತುವಿಗೆ ಸಂಬಂಧಿಸಿದಂತೆ, ಕೆಲವು ಪರಿಶಿಷ್ಟಗಳನ್ನು ಗ್ರಂಥದ ಕೊನೆಗೆ ಕೊಡಲಾಗಿದೆ. ಇವುಗಳ ಸಂಯೋಜನೆಯಲ್ಲಿ ಅಚ್ಚುಕಟ್ಟು ಸಾಲದೆಂದು ಹೇಳಬೇಕು.

ಗ್ರಂಥಪಾಠ ಒಟ್ಟಿನಲ್ಲಿ ತೃಪ್ತಿಕರವಾಗಿಯೇ ಇದೆಯಾದರೂ ಕೆಲವೆಡೆ ವಿಚಾರಣೀಯವಾದ ಅಂಶಗಳಿವೆ. ಈ ಸಂಬಂಧದಲ್ಲಿ ಬಿ. ಎಂ. ಶ್ರೀಕಂಠಯ್ಯ

ಅವರು ಬರೆದ ಒಂದು ವಿಮರ್ಶೆಯಲ್ಲಿ ಕೆಲವು ಸಂಗತಿಗಳ ಪರಿಶೀಲನೆಯಿದೆ-(Karnataka Kavirajamargam, QJMS, Vol. 23-5, January 1933, pp. 436-42). ಇಲ್ಲಿ ಸ್ವೀಕಾರಾರ್ಹವಾದ ಅನೇಕ ಪಾಠಗಳನ್ನು ಅವರು ಸೂಚಿಸಿರುವುದು ಕಾಣುತ್ತದೆ; ಮುದ್ರಿತವಾದ ಎರಡು ಪರಿಷ್ಕರಣಗಳ ಪಾಠಗಳನ್ನೂ ತುಲನೆ ಮಾಡಿ ಸೂಕ್ತವಾದುವನ್ನು ಎತ್ತಿ ಹೇಳಿರುವುದೂ ಅಲ್ಲಲ್ಲಿ ಕಾಣುತ್ತದೆ. ಉದಾಹರಣೆಗೆ ನಾಂದೀ ಪದ್ಯದ ವಿಷಯದಲ್ಲಿ ಅವರು ಪಾಠಕರ ಸೂಚನೆಯನ್ನೇ ಒಪ್ಪಿರುವುದು ಸೂಕ್ತವೇ ಇದೆ.

ಇದರ ಮುಂದಿನ ಪರಿಷ್ಕರಣವನ್ನು ಸಿದ್ಧಪಡಿಸಿದವರು, ಎಂ. ವಿ. ಸೀತಾರಾಮಯ್ಯನವರು. ಇದು ಬೆಂಗಳೂರು ಕಲಾ ಮತ್ತು ವಿಜ್ಞಾನ ಕಾಲೇಜಿನ ಕರ್ಣಾಟಕ ಸಂಘದಿಂದ ೧೯೬೮ರಲ್ಲಿ ಪ್ರಕಟವಾಗಿದೆ. ಶ್ರೀಯುತರು ತಮ್ಮ ಈ ಪರಿಷ್ಕರಣದ ೬ನೆಯ ಅನುಬಂಧದಲ್ಲಿ ಅದನ್ನು ಸಿದ್ಧಪಡಿಸಿದ ರೀತಿಯನ್ನು ಸ್ವಲ್ಪ ಮಟ್ಟಿಗೆ ವಿವರಿಸಿದ್ದಾರೆ; ಇತಿಮಿತಿಗಳನ್ನೂ ತಿಳಿಸಿದ್ದಾರೆ. ತಾವು ಪಾಠಕರ ಮುದ್ರಣವನ್ನೇ ಮುಖ್ಯ ಆಧಾರವಾಗಿ ಇಟ್ಟುಕೊಂಡಿರುವುದಾಗಿ ಸ್ಪಷ್ಟಪಡಿಸಿದ್ದಾರೆ. (ಆ ಮುದ್ರಣ C ಪ್ರತಿಯ ಪಾಠವನ್ನೇ ಹೆಚ್ಚಾಗಿ ಅವಲಂಬಿಸಿದೆ ಎಂಬುದು ಅವರ ಅಭಿಪ್ರಾಯ). ಇದೇ ಅನುಬಂಧದಲ್ಲಿ 'ಮುಖ್ಯ ಪಾಠಾಂತರಗಳು' ಎಂಬ ಶೀರ್ಷಿಕೆಯ ಕೆಳಗೆ, ವಿಸ್ತಾರವಾಗಿಯೇ ಬಿ. ಎಂ. ಶ್ರೀ. ಅವರ ಸೂಚನೆಗಳನ್ನೊಳಗೊಂಡು ಎಲ್ಲ ಮುದ್ರಿತ ಹಾಗೂ ಹಸ್ತಲಿಖಿತ ಪ್ರತಿಗಳ ಪಾಠಭೇದಗಳನ್ನೂ ಪರಿಷ್ಕಾರವಾಗಿ ತೋರಿಸಲಾಗಿದೆ. ಟಿಪ್ಪಣಿಗಳ ಭಾಗದಲ್ಲಿಯೂ ಅಲ್ಲಲ್ಲಿ ಪಾಠವಿಮರ್ಶೆಗಳು ಸೂಕ್ಷ್ಮವಾಗಿ ನಡೆದಿವೆ. ಗ್ರಂಥಭಾಗದಲ್ಲಿ ಅಡಿಟಿಪ್ಪಣಿಗಳಲ್ಲಿಯೇ ಪಾಠಾಂತರಗಳನ್ನು ತೋರಿಸಿದ್ದರೆ, ಅವುಗಳ ಉಪಯುಕ್ತತೆ ಹೆಚ್ಚುತ್ತಿದ್ದಿತು.

ಎಲ್ಲ ಹಸ್ತಪ್ರತಿಗಳ ಉತ್ತಮಾಂಶಗಳನ್ನೂ ಒಳಗೊಂಡ ಒಂದು ಸಮ್ಮಿಶ್ರ ಪರಿಷ್ಕರಣವಾಗಿ ಈವರೆಗಿನ ಸಂಸ್ಕರಣಗಳಲ್ಲೆಲ್ಲ ಇದು ಉತ್ತಮವಾಗಿದೆಯೆನ್ನಬಹುದು. ಮಾಡಿರುವ ತಿದ್ದುಪಾಟುಗಳು ಹಲವೆಡೆಗಳಲ್ಲಿ ಊಹಾತ್ಮಕಗಳಾಗಿಯೂ ಗಮನಾರ್ಹಗಳಾಗಿವೆ, ಗ್ರಾಹ್ಯಗಳಾಗಿವೆ. ಹಸ್ತಪ್ರತಿಗಳ ಪಾಠಭೇದಗಳನ್ನೆಲ್ಲ ಸಂಕಲಿಸಿ, ತೌಲನಿಕವಾಗಿ ಪರಿಶೀಲಿಸಿದ್ದರೆ, ಪಾಠನಿಷ್ಕರ್ಷೆ ಇನ್ನೂ ಉತ್ತಮಗೊಳ್ಳುವುದು ಸಾಧ್ಯವಿದ್ದಿತೋ ಏನೋ? ಆದರೆ ಸೀತಾರಾಮಯ್ಯನವರಿಗೆ ಗ್ರಂಥಪಾಠಕ್ಕಿಂತ ವಿಶೇಷವಾಗಿ ಕರ್ತೃತ್ವವಿಚಾರದ ಸಮಸ್ಯೆ, ವಸ್ತುವಿಮರ್ಶೆ ಕುರಿತ ಟಿಪ್ಪಣಿಗಳು ಹೆಚ್ಚು ಮುಖ್ಯವೆಂದು ತೋರಿರುವಂತಿದೆ.

ಎಂ. ವಿ. ಸೀತಾರಾಮಯ್ಯನವರೇ ಇದರ ಒಂದು ಜನಪ್ರಿಯ ಆವೃತ್ತಿಯನ್ನು ೧೯೭೫ರಲ್ಲಿ ಹೊರತಂದಿದ್ದಾರೆ. ಇದರಲ್ಲಿ ವಿಸ್ತಾರವಾದ ಟಿಪ್ಪಣಿಗಳ ಸ್ಥಾನದಲ್ಲಿ, ವಿವರವಾದ ಅರ್ಥಕೋಶವಿದೆ. ಗ್ರಂಥಪಾಠದಲ್ಲಿ ಮೇಲ್ಪಾಡುಗಳನ್ನು

ಮಾಡಿರುವುದಾಗಿಯೂ ಹೊಸ ಹಸ್ತಪ್ರತಿಗಳ ನೆರವು ದೊರೆತರೆ, ಪಾಠಕ್ಲೇಶಗಳ ಪರಿಹಾರ ಸಾಧ್ಯವೆಂದೂ 'ಬಿನ್ನಹ'ದಲ್ಲಿ ತಿಳಿಸಿದ್ದಾರೆ.

ಎರಡನೆಯ ಗ್ರಂಥ ನಾಗವರ್ಮನ 'ಕಾವ್ಯಾವಲೋಕನ'. ಆರ್. ನರ ಸಿಂಹಾಚಾರ್ಯರು ಇದರ ಸಂಪಾದಕರು. ಇದನ್ನು ನಾಲ್ಕು ಹಸ್ತಪ್ರತಿಗಳ ಆಧಾರದ ಮೇಲೆ ಸಿದ್ಧಪಡಿಸಿರುವುದಾಗಿ ಅವರು ತಿಳಿಸಿದ್ದಾರೆ. ಅದರ ವಿವರಗಳನ್ನು ತಮ್ಮ ಇಂಗ್ಲಿಷ್ ಉಪೋದ್ಘಾತದ ಕೊನೆಗೆ ಹೀಗೆ ತಿಳಿಸಿದ್ದಾರೆ: (i) ಪುರಾತತ್ವ ಇಲಾಖೆಯ ಕಾಗದ ಪ್ರತಿ; ಕೊನೆಯ ಅಧ್ಯಾಯದ ಹೊರತು ಉಳಿದ ಭಾಗ ತಕ್ಕ ಮಟ್ಟಿಗೆ ಶುದ್ಧವಾದ್ದು. ii) ಮೈಸೂರು ಬಿ. ಮಲ್ಲಪ್ಪನವರು ಒದಗಿಸಿದ ಕಾಗದ ಪ್ರತಿ; ಉತ್ತರಾರ್ಧದ ಮಟ್ಟಿಗೆ ಸಮಗ್ರವಾಗಿದ್ದರೂ ಪೂರ್ವಾರ್ಧ ಭಾಗಗಳಲ್ಲಿ ಅಶುದ್ಧವಾದ್ದು. (iii) ಎಂ. ಎ. ರಾಮಾನುಜ ಅಯ್ಯಂಗಾರ್ಯರಿಂದ ಎರವಲಾಗಿ ಬಂದ ಓಲೆ ಪ್ರತಿ; ಸಮಗ್ರವಾದ್ದು, ಆದರೆ ಅಶುದ್ಧವಾದ್ದು. (iv) ಪುರಾತತ್ವ ಇಲಾಖೆಯ ಹಿರಿಯ ಪಂಡಿತ ಬಿ. ಶ್ರೀನಿವಾಸಯ್ಯಂಗಾರ್ಯರಿಂದ ಎರವಲಾಗಿ ಬಂದ ಕಾಗದ ಪ್ರತಿ; ಸಮಗ್ರವಾದ್ದು, ತಕ್ಕಮಟ್ಟಿಗೆ ಶುದ್ಧವಾದ್ದು. ಈ ಎಲ್ಲ ಹಸ್ತಪ್ರತಿಗಳಲ್ಲಿಯೂ ಚಿತ್ರಕವಿತ್ವಭಾಗದ ಹಲವು ಪದ್ಯಗಳಲ್ಲಿ ದೋಷಗಳ ಕಾರಣ, ಲಕ್ಷ್ಯ ಸಮನ್ವಯ ತೋರುವುದಿಲ್ಲ ಎಂಬುದು ವಿಷಾದಕರವಾಗಿದೆ.

ನರಸಿಂಹಾಚಾರ್ಯರು ತಾವು ಬಳಸಿದ ಹಸ್ತಪ್ರತಿಗಳಿಗೆ ಸಂಕೇತಗಳನ್ನು ಕೊಟ್ಟಿಲ್ಲ. ಅಲ್ಲದೆ ಪಾಠಾಂತರಗಳನ್ನು ಸೂಚಿಸುವಾಗಲೂ ಅವು ಯಾವ ಯಾವ ಪ್ರತಿಯದು ಎನ್ನುವುದನ್ನು ತಿಳಿಸಿಲ್ಲ. ಆದರೆ ಪಾಠಾಂತರಗಳನ್ನು ಅಡಿಟಿಪ್ಪಣಿಗಳಲ್ಲಿಯೇ ಸೂಚಿಸಿರುವುದು ಒಂದು ತೃಪ್ತಿಕರ ವಿಷಯ. 'ಕಾವ್ಯಾವಲೋಕನ'ದ ಉದಾಹರಣಪದ್ಯಗಳ ಆಕರಗ್ರಂಥಗಳಲ್ಲಿ ಕಂಡುಬರುವ ಆಯಾ ಪದ್ಯದ ಪಾಠಾಂತರಗಳನ್ನು ಪರಿಶಿಷ್ಟ ಭಾಗದಲ್ಲಿ ಕೊಟ್ಟಿದೆ. ಶ್ರೀಯುತರು ಪ್ರಾಯಃ ಆಧಾರಪ್ರತಿಯೊಂದನ್ನು ಇಟ್ಟುಕೊಂಡು ಉಳಿದ ಪ್ರತಿಗಳ ಸಹಾಯ ಪಡೆದು ಎಲ್ಲ ಪ್ರತಿಗಳ ಉತ್ತಮಾಂಶಗಳ ಒಂದು ಸಮ್ಮಿಶ್ರ ಪರಿಷ್ಕರಣವನ್ನು ಸಿದ್ಧಪಡಿಸಿರ ಬಹುದು, ಅವರು ಹಳಗನ್ನಡ ಭಾಷೆ, ಸಾಹಿತ್ಯಗಳ ಉತ್ಕೃಷ್ಟ ವಿದ್ವಾಂಸರಾಗಿದ್ದುದ ರಿಂದ, ಅವರ ಪರಿಷ್ಕರಣದ ಪಾಠಶುದ್ಧಿ ಪ್ರಮಾಣಭೂತವಾದುದಾಗಿದೆ ; ಇತರರಿಗೆ ಮಾದರಿಯಾಗಬಲ್ಲುದಾಗಿದೆ. ಉದಾಹರಣೆಗೆ 'ಎನಗೆ ಕೂರ್ಪುದನಾ ಘಟಸಂಭವ' ಎಂಬಂತಹ (ಪ. ೧೫೫) ಪದ್ಯಗಳಲ್ಲಿ ಅವರ ಭಾಷಾಜ್ಞಾನ ಹೇಗೆ ಕೆಲಸ ಮಾಡಿದೆ ಎಂಬುದನ್ನು ಗಮನಿಸಬಹುದು. ಶಬ್ದರೂಪಗಳನ್ನು ಮುದ್ರಿಸುವಲ್ಲಿ ಮಾತ್ರ ಅವರು ರೈಸ್ ಅವರ ಹಾಗೆಯೇ ಶಾಸನಗಳಲ್ಲಿ ಹಾಗೂ ಹಸ್ತಪ್ರತಿಗಳಲ್ಲಿ ಬರೆದಿರು ವಂತೆ, ದ್ವಿತ್ವರೂಪದಲ್ಲಿ ಸರೇಫಶಬ್ದಗಳನ್ನು ಮುದ್ರಿಸುವ ಪರಿಪಾಠಿಯನ್ನು ಮುಂದುವರಿಸಿದ್ದಾರೆ. ಇದರ ಅಗತ್ಯವಿದ್ದಿತೆಂದು ತೋರುವುದಿಲ್ಲ.

ಈ ಪರಿಷ್ಕರಣ ಮತ್ತು ಪಾಠಕ್ರಮವನ್ನೇ ಮೂಲವಾಗಿಟ್ಟುಕೊಂಡು, ಬೇ

ಎರಡು ಹಸ್ತಪ್ರತಿಗಳನ್ನು ಬಳಸಿ, ೧೯೩೮ರಲ್ಲಿ ‘ಕಾವ್ಯಾವಲೋಕನ’ದ ಇನ್ನೊಂದು ಪರಿಷ್ಕರಣವನ್ನು ಹೊರತರಲಾಗಿದೆ. ಇದನ್ನು ಸಂಪಾದಿಸಿರುವವರು ಎಚ್. ಆರ್. ರಂಗಸ್ವಾಮಿ ಅಯ್ಯಂಗಾರ್ಯರು. ಪೀಠಿಕೆಯ ಆರಂಭ ಭಾಗದಲ್ಲಿ ಹಸ್ತಪ್ರತಿಗಳ ಬಗೆಗೆ ಸ್ವಲ್ಪ ಬರೆಯಲಾಗಿದೆ. ಇದರ ಪ್ರಕಾರ ನರಸಿಂಹಾಚಾರ್ಯರು ಕವಿಪಾಠವೆಂದು ಅಂಗೀಕರಿಸಿದ್ದನ್ನು ‘ಇ’ ಎಂದೂ ಪಾಠಾಂತರಗಳಾಗಿ ಸೂಚಿಸಿದ್ದನ್ನು ‘ಅ’ ಎಂದೂ ಮದ್ರಾಸ್ ಪ್ರತಿಯ ಪಾಠವನ್ನು ‘ಮ’ ಎಂದೂ ಚಾಮರಾಜನಗರದ ಪ್ರತಿಯ ಪಾಠವನ್ನು ‘ಓ’ ಎಂದೂ ನಿರ್ದೇಶಿಸಿರುವಂತೆ ತೋರುವುದು. ಈ ಎರಡನೆಯ ಪರಿಷ್ಕರಣವಲ್ಲಿ ಈ ಸಂಕೇತಾಕ್ಷರಗಳೊಂದಿಗೆ ಪಾಠಾಂತರಗಳನ್ನು ಅಡಿಟಿಪ್ಪಣಿಗಳಲ್ಲಿ ಗುರುತಿಸಿದೆ. ಇದು ಹಿಂದಿನ ಪರಿಷ್ಕರಣದ ಉತ್ತಮಿಕೆಯನ್ನು ಹೆಚ್ಚಿಸಿದ ಒಂದು ಸೂಕ್ತವಾದ ಕ್ರಮ. ಪಾಠಗಳನ್ನು ಅಲ್ಲಲ್ಲಿ ಹೊಸಪ್ರತಿಗಳ ಆಧಾರದ ಮೇಲೆ ಬದಲಾಯಿಸಿರುವುದು ಧಾರಾಳವಾಗಿ ಕಾಣುತ್ತದೆ. ಇದರಿಂದ ಗ್ರಂಥದ ಪಾಠಶೌಲ್ಯದ ಮೇಲೆ ಆಗಿರುವ ಪರಿಣಾಮವನ್ನು ವಿವರವಾದ ಪರಿಶೀಲನೆಯಿಂದ ಮಾತ್ರ ಸಾವಕಾಶವಾಗಿ ತಿಳಿಯಬೇಕಾಗಿದೆ.

ನರಸಿಂಹಾಚಾರ್ಯರ ಪರಿಷ್ಕರಣದ ಇನ್ನೊಂದು ಮುದ್ರಣ ಎಚ್. ದೇವೀರಪ್ಪನವರ ಪ್ರಧಾನ ಸಂಪಾದಕತ್ವದಲ್ಲಿ, ಮೈಸೂರು ವಿಶ್ವವಿದ್ಯಾನಿಲಯದ ಪ್ರಾಚ್ಯವಿದ್ಯಾ ಸಂಶೋಧನಾಲಯದ ಮೂಲಕವಾಗಿ ೧೯೬೭ರಲ್ಲಿ ಪ್ರಕಟವಾಯಿತು. ಇದರ ಸಿದ್ಧತೆಯಲ್ಲಿ ಇನ್ನೆರಡು ಹೊಸಪ್ರತಿಗಳ ನೆರವು ಪಡೆಯಲಾಗಿದೆ. ಈ ಪರಿಷ್ಕರಣದ ಮೂಲಪ್ರತಿಯನ್ನು ಸಂಸ್ಥೆಯ ಪುಸ್ತಕಭಂಡಾರದ ಕೆ. ೫೭೨ನೆಯ ಸಂಖ್ಯೆಯ ಓಲೆಯ ಪ್ರತಿಯನ್ನು ಅವಲಂಬಿಸಿ ಸಿದ್ಧಪಡಿಸಿದೆಯೆಂದೂ ಆರ್. ನರಸಿಂಹಾಚಾರ್ಯರ ೧೯೦೩ರ ಮುದ್ರಣವನ್ನೊಳಕೊಂಡು, ಅಲ್ಲಿಯ ಪಾಠಾಂತರಗಳನ್ನೂ ಒಳಕೊಂಡು, ಮೂಡಬಿದರೆ, ಮದ್ರಾಸು ಮತ್ತು ಮೈಸೂರು ಡಿ. ಎಲ್. ನರಸಿಂಹಾಚಾರ್ಯರ ಪ್ರತಿಗಳ ನೆರವು ಪಡೆದಿದೆಯೆಂದೂ ಪೀಠಿಕೆಯ ಆರಂಭದಲ್ಲಿ ತಿಳಿಸಲಾಗಿದೆ. “ಮೊದಲ ಮುದ್ರಣದ ಮತ್ತು ಎರಡನೆಯ ಮುದ್ರಣದ ಪಾಠದಲ್ಲಿ ಗಮನಾರ್ಹವಾದ ಯಾವ ಬದಲಾವಣೆಯನ್ನು ಮಾಡಿರುವುದಿಲ್ಲ” ಎಂದು ತಿಳಿಸಿದೆ; ವ್ಯತ್ಯಾಸಗಳಿದ್ದರೆ, ಪಾಠಶೌಲ್ಯದ ದೃಷ್ಟಿಯಿಂದ ಪರಿಶೀಲಿಸಬೇಕು.

ಈ ಮೊದಲೇ ಶಿ. ಶಿ. ಬಸವನಾಳ ಮತ್ತು ಕೇಪು. ಶಂಕರನಾರಾಯಣ ಅವರು ಧಾರವಾಡ ಕರ್ನಾಟಕ ವಿದ್ಯಾವರ್ಧಕ ಸಂಘದ ಮೂಲಕ ೧೯೩೮ರಲ್ಲಿಯೇ ‘ಕಾವ್ಯಾವಲೋಕನ’ದ ಬೇರೊಂದು ಪರಿಷ್ಕರಣವನ್ನು ಪ್ರಚುರಪಡಿಸಿದರು. ಇದಕ್ಕಾಗಿ ಅವರು ಹೊಸಮಾತೃಕೆಗಳಿಂದ ಪಾಠಾಂತರಗಳನ್ನು ಕೊಟ್ಟಿರುವುದಾಗಿ ಈ ಪರಿಷ್ಕರಣವನ್ನು ಕುರಿತು ತಮ್ಮ ಒಂದು ವಿಮರ್ಶೆಯ ಲೇಖನದಲ್ಲಿ ಬಿ. ಎಂ. ಶ್ರೀಕಂಠಯ್ಯನವರು ತಿಳಿಸಿರುವರಾದರೂ ಈ ಪರಿಷ್ಕರಣಕರ್ತರು ಹೊಸ ಮಾತೃಕೆಗಳೇನನ್ನೂ ಬಳಸಿರುವಂತೆ ತೋರುವುದಿಲ್ಲ. ಅವರ ಪ್ರಸ್ತಾವನೆಯಲ್ಲಿ ಸಹ ಆ

ಬಗೆಗೆ ಸೂಚನೆಯಿಲ್ಲ. ಗ್ರಂಥದ ಆರಂಭದಲ್ಲಿ ಒಂದು ಚಿಕ್ಕ ಪ್ರಸ್ತಾವನೆಯೂ ಕೊನೆಗೆ ೧೩೦ ಪುಟಗಳಷ್ಟು ಗ್ರಂಥೋಪಯುಕ್ತ ವಿಷಯಗಳ ಟಿಪ್ಪಣಿಗಳೂ ಇದ್ದು, ಈ ಟಿಪ್ಪಣಿಗಳು ಅಭ್ಯಾಸಿಗಳಿಗೆ ಸಹಾಯಕವಾಗಿವೆ. ಪದ್ಯಗಳ ಅಕಾರಾದಿ, ಪಾ ಭಾಷಿಕ ಶಬ್ದಾನುಕ್ರಮಣಿಕೆ ಇವೂ ಉಪಯುಕ್ತವಾಗಿವೆ. ಈ ಪರಿಷ್ಕರಣವನ್ನೂ ಇದರ ಹಿಂದಿನ ಮೈಸೂರು ಪರಿಷ್ಕರಣವನ್ನೂ ಜೊತೆಗಿಟ್ಟು, ಪಾಠವಿಮರ್ಶೆ ಮಾಡಿ ರುವ ಬಿ. ಎಂ. ಶ್ರೀ. ಅವರು ಎರಡರ ಲೋಪದೋಷಗಳನ್ನೂ ಕೆಲವು ಕಡೆಗಳ ಮಟ್ಟಿಗೆ ತೋರಿಸಿದ್ದಾರೆ. ಈ ಸಂಬಂಧದಲ್ಲಿ ಅವರು "ಪಾಠಾಂತರಗಳನ್ನು ವಿಚಕ್ಷಣ ಯಿಂದ ಆಯ್ದು ಕೊಡುವುದೊಳ್ಳೆಯದು. ಸಂದೇಹಕ್ಕವಕಾಶ ಇರುವ ಕಡೆ ಕೊಡ ಬೇಕು. ಪ್ರತಿಮಾಡುವವರ ಪ್ರಮಾದಗಳನ್ನೆಲ್ಲಾ ತೋರಿಸುವುದರಿಂದ ಪ್ರಯೋ ಜನವಿಲ್ಲ" ಎಂದು ಹೇಳಿರುವುದನ್ನು ನಮ್ಮ ಪ್ರಾಚೀನ ಗ್ರಂಥಗಳ ಸಂಪಾದಕರ್‍ಲ್ಲ ಅವಶ್ಯವಾಗಿ ಗಮನಿಸಬೇಕು. ಹೀಗೆಯೇ "ರ–ಱ, ಳ–ೞ–ಇದನ್ನು ಎಚ್ಚರಿಕೆ ಯಿಂದ ಬಿಡಿಸಬೇಕು. ಈಗಿನ ಅಚ್ಚಿನ ಪ್ರತಿಗಳಲ್ಲಿ ಇವು ಸರಿಯಾಗಿಲ್ಲದೆ ಓದುಗರಲ್ಲಿ ಭ್ರಮೆಯನ್ನುಂಟುಮಾಡುತ್ತಿವೆ. ಶೋಧನೆಯಲ್ಲಿ ಅನುಮಾನ ಬಂದ ಕಡೆ ತಮಿಳನ್ನು ನೋಡಬೇಕು" ಎಂದಿರುವ ಅವರ ಇನ್ನೊಂದು ಮಾತನ್ನೂ ಗಮನಿಸ ಬೇಕಾಗುತ್ತದೆ.

'ಕಾವ್ಯಾವಲೋಕನ' ದ ಮೇಲಿನ ೪ ಪರಿಷ್ಕರಣಗಳಲ್ಲಿಯೂ ಆಯಾ ಪರಿ ಷ್ಕರಣದ ಸಂಪಾದಕರು ಹಸ್ತಪ್ರತಿಗಳನ್ನೂ ಮುದ್ರಿತಪ್ರತಿಗಳನ್ನೂ ಮಾತ್ರವಲ್ಲದೆ ಉದ್ಧೃತ ಪದ್ಯಗಳ ಆಕರಗ್ರಂಥಗಳ ವಿಭಿನ್ನಪಾಠಗಳನ್ನೂ ಉಪಯೋಗಿಸಿ, ಸ್ವತಂತ್ರವಾಗಿ ಸಂಪಾದನ ಕಾರ್ಯವನ್ನು ನಿರ್ವಹಿಸಿರುವುದು ಕಾಣುತ್ತದೆ. ಆರ್. ನರಸಿಂಹಾಚಾರ್ಯರು ಅಂಗೀಕರಿಸಿದ ಗ್ರಂಥಪಾಠವನ್ನು ಬಹುಶಃ ವಿಶೇಷವಾಗಿ ವ್ಯತ್ಯಾಸಗೊಳಿಸದೆ, ಅಲ್ಲಲ್ಲಿ ಸ್ವಂತವಿಚಕ್ಷಣೆಯಿಂದ ಪಾಠಗಳನ್ನು ಉತ್ತಮ ಪಡಿಸಲು ಪ್ರಯತ್ನಿಸಿರುವುದುಂಟು. ಆದರೆ ಕೆಲವು ಸಂದರ್ಭಗಳಲ್ಲಿ ೧೯೦೩ರ ಪರಿಷ್ಕರಣದ ಪಾಠಗಳೇ ಉತ್ತಮವಾಗಿವೆಯೆನ್ನಬೇಕು.

ಮುಂದಿನ ಗ್ರಂಥ 'ಉದಯಾದಿತ್ಯಾಲಂಕಾರ': ಎಸ್. ಜಿ. ನರಸಿಂಹಾಚಾರ್ ಮತ್ತು ಮಂ. ಆ. ರಾಮಾನುಜಯ್ಯಂಗಾರ್ಯರಿಂದ ಸಂಪಾದಿತವಾಗಿ, ಕರ್ಣಾಟಕ ಕಾವ್ಯಮಂಜರಿಯ ೬ನೆಯ ಪುಸ್ತಕವಾಗಿ ೧೮೯೬ರಲ್ಲಿ ಮೈಸೂರಿನಿಂದ ಇದು ಮೊದಲು ಪ್ರಕಟವಾಯಿತು. ಇದರ ಪೀಠಿಕೆಯಲ್ಲಿ ಕವಿವಿಚಾರ ಸ್ವಲ್ಪವಿದ್ದರೂ ಬಳಸಿದ ಹಸ್ತಪ್ರತಿಗಳ ವಿವರಗಳಿಲ್ಲ. ಆದರೆ ಗ್ರಂಥಶರೀರದ ಅಡಿಟಿಪ್ಪಣಿಭಾಗ ದಿಂದ ೩ ಹಸ್ತಪ್ರತಿಗಳನ್ನು ಬಳಸಿರುವುದು ತಿಳಿಯುತ್ತದೆ. ಕಾವ್ಯಭೇದ ಅಲಂಕಾರಾದಿ ವಿಷಯಗಳಿಗೆ ಅನುಗುಣವಾಗಿ ಪದ್ಯಗಳನ್ನು ಅಲ್ಲಲ್ಲಿ ಒಡೆದು ಮಗ್ಗುಲಲ್ಲಿ ಆಯಾ ಅಲಂಕಾರದ ಹೆಸರಿನೊಂದಿಗೆ ಮುದ್ರಿಸಿರುವುದು ಕಾಣುತ್ತದೆ. ಇದು ಅಗತ್ಯವಿರಲಿಲ್ಲ.

ಎಂ. ವಿ. ಸೀತಾರಾಮಯ್ಯನವರು ಈ ಕೃತಿಯನ್ನು ೩ ಹಸ್ತಪ್ರತಿಗಳು ಮತ್ತು ಪೂರ್ವೋಕ್ತ ಮುದ್ರಿತಪ್ರತಿಯ ಆಧಾರದ ಮೇಲೆ ಪುನಃ ಸಂಪಾದಿಸಿದ್ದಾರೆ. ಇವುಗಳಲ್ಲಿ ೨ ಹಸ್ತಪ್ರತಿಗಳು ಮೈಸೂರು ಕನ್ನಡ ಅಧ್ಯಯನ ಸಂಸ್ಥೆಗೆ ಸೇರಿದುವಾಗಿದ್ದು, ಎರಡೂ ಓಲೆ ಪ್ರತಿಗಳಾಗಿವೆ; ೩ನೆಯದು ಮೇಲುಕೋಟೆಯಲ್ಲಿ ಸಂಪ್ರತಿಯಾದ್ದು, ಬಹುಶಃ ಉಕ್ತ ಓಲೆಪ್ರತಿಗಳಲ್ಲಿ ಒಂದರ ಮರುಪ್ರತಿಯೇ ಎಂದು ಹೇಳಬಹುದಾದ್ದು. ಈ ಎಲ್ಲ ಸಾಮಗ್ರಿಗಳ ಆಧಾರದಿಂದ ಸಂಪಾದನಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸಲಾಗಿದೆ. 'ಱ'ದ ಪ್ರಯೋಗವಿರುವ ಕನ್ನಡ ಅಧ್ಯಯನ ಸಂಸ್ಥೆಯ ಒಂದು ಹಸ್ತಪ್ರತಿಯನ್ನು (ಕೆ. ಪಿ. ೩೩೧ : ಅ) ಪ್ರಾಚೀನತಮವೆಂದು ನಿಶ್ಚಯಿಸಿ, ಅದೊಂದೇ ಸಮಗ್ರವೂ ಆಗಿದೆಯೆಂಬ ಕಾರಣದಿಂದಲೂ ಅದನ್ನೇ ಆಧಾರಭೂತವಾಗಿಟ್ಟುಕೊಂಡಿದೆ, ಇಲ್ಲಿ. ಪಾಠಾಂತರಗಳನ್ನು ಅಗತ್ಯವಿದ್ದ ಮಟ್ಟಿಗೆ ತೋರಿಸಿದೆ. 'ೞ'ಕಾರ ಘಟಿತವಾದ ಪದಗಳನ್ನು ಅವುಗಳ ಯಥಾರೂಪದಲ್ಲಿರಿಸಿದೆ.

ಗ್ರಂಥದ ಕೆಲಭಾಗ ಅಸಮಗ್ರವಾಗಿದ್ದು, ಒಂದೇ ಹಸ್ತಪ್ರತಿಯನ್ನು ಆ ಭಾಗದಲ್ಲಿ ಆಶ್ರಯಿಸಬೇಕಾಗಿದ್ದು, ಅಲ್ಲಲ್ಲ ಪಾಠಸಮಸ್ಯೆಗಳೂ ತ್ರುಟಿತಗಳೂ ಹೆಚ್ಚಾಗಿ ಉಳಿದಿರುವುದನ್ನು ಸೂಕ್ತ ಪಾಠಪರಿಷ್ಕರಣದಿಂದ ನಿವಾರಿಸಲಾಗಿದೆ. ಮೊದಮೊದಲ ಭಾಗಗಳಲ್ಲಿಯೂ ಇಂಥ ಕ್ಲೇಶಗಳಿದ್ದು, ಅವನ್ನೂ ಪರಿಹರಿಸಲಾಗಿದೆ. ಇದರಿಂದ ಹಿಂದಿನ ಪರಿಷ್ಕರಣವನ್ನು ಅನೇಕ ವಿಧಗಳಲ್ಲಿ ಉತ್ತಮಪಡಿಸಿದಂತಾಗಿದೆ. ಉದಾಹರಣೆಗೆ, ಅಷ್ಟಾದಶ ವರ್ಣನೆಗಳ ಪಟ್ಟಿಯನ್ನು ಕೊಡುವ "ಉದಧಿ ಪುರಾಧಿಪ...." ಎಂಬ ಪದ್ಯವನ್ನು (೧೩) ನೋಡಬಹುದು. ಆದರೆ ಒಂದೊಂದೆಡೆ ಪಾಠಸಂಯೋಜನೆ ತೃಪ್ತಿಕರವಾಗಿಲ್ಲದಿರುವುದೂ ಉಂಟು. ಉದಾಹರಣೆಗೆ, ನಾಂದೀಪದ್ಯ (ಪ.೧)ದ ಪಾಠ ಪ್ರಥಮಪರಿಷ್ಕರಣದಲ್ಲಿರುವುದೇ ಸರಿ. ಕಾರಣ, ಗ್ರಂಥಕರ್ತೃ ಮೊದಲೆರಡು ಪದ್ಯಗಳ ಒಂದು ಕುಳಕವನ್ನು ಇಲ್ಲಿ ಬರೆದಿರುವಂತೆ ತೋರುತ್ತದೆ; ಇದನ್ನು ಪ್ರಥಮ ಮುದ್ರಣದ ಪರಿಷ್ಕರಣಕರ್ತರೇ ಸೂಚಿಸಿಯೂ ಇದ್ದಾರೆ. ಇನ್ನು ಉಪೋದ್ಘಾತ, ಟಿಪ್ಪಣಿಗಳು, ಅನುಬಂಧ ಇವೆಲ್ಲ ಗ್ರಂಥದ ಆಶಯವನ್ನು ಸ್ಪಷ್ಟಪಡಿಸಿ, ಮಹತ್ತ್ವವನ್ನು ಸ್ಥಾಪಿಸುವ ವ್ಯಾಪ್ತಿಯಲ್ಲಿರುವುದು ಮೆಚ್ಚತಕ್ಕದ್ದಾಗಿದೆ.

ಈಚೆಗೆ 'ಉದಯಾದಿತ್ಯಾಲಂಕಾರ'ದ ಬೇರೊಂದು ಹಸ್ತಪ್ರತಿಯನ್ನು ಬಿ. ಎಸ್. ಸಣ್ಣಯ್ಯನವರು ಗುರುತಿಸಿ, ಅದರ ಸ್ವರೂಪವನ್ನು ತಮ್ಮ ಒಂದು ಲೇಖನದಲ್ಲಿ (ಉದಯಾದಿತ್ಯಾಲಂಕಾರದ ಅಪೂರ್ವ ಹಸ್ತಪ್ರತಿ, 'ಇಕ್ಷುಕಾವೇರಿ', ಮಂಡ್ಯ, ೧೯೭೪, ಪು.೨೧೦-೧೨) ವಿವರಿಸಿದ್ದಾರೆ. ಇವರ ಸೂಚನೆಯ ಪ್ರಕಾರ, ಈ ಕೃತಿಯ ಒಂದು ಹಸ್ತಪ್ರತಿ ಕೇವಲ ಲಕ್ಷಣಪದ್ಯಗಳಿಂದಲೂ ಇನ್ನೊಂದು ಹಸ್ತಪ್ರತಿ ಲಕ್ಷಣಪದ್ಯಗಳು ಮತ್ತು ಬಂಧುವರ್ಮನ 'ಹರಿವಂಶಾಭ್ಯುದಯ'ದಿಂದಾಯ್ದ ಲಕ್ಷ್ಯಪದ್ಯಗಳಿಂದಲೂ ಕೂಡಿದ್ದು, ಈಯೆರಡೂ ಐದು ಓಲೆಗಳಲ್ಲಿ ಲಿಖಿತವಾಗಿ ಯಾವುದೋ ಓಲೆಕಟ್ಟಿನಲ್ಲಿ ಬೇರೆ ಕೃತಿಯೊಂದಿಗೆ ಸೇರಿದ್ದುದೆಂದು ತಿಳಿಯುವುದು.

ಇವನ್ನು ಉಪಯೋಗಿಸಿಕೊಂಡು, ಸಂಪಾದನೆಯನ್ನು ಉತ್ತಮಪಡಿಸುವ ಸಾಧ್ಯತೆ ಯೇನೋ ಇದೆ. ಅಲ್ಲದೆ ಲಕ್ಷ್ಯಪದ್ಯಗಳಿರುವ ಪ್ರತಿಯು, ಗ್ರಂಥಸಂಪಾದನೆಯಲ್ಲಿ ಪ್ರಕ್ಷಿಪ್ತಭಾಗಗಳು (?) ಒಡ್ಡುವ ಸಮಸ್ಯೆಯೆಂತಹುದು ಎನ್ನುವುದನ್ನು ತಿಳಿಯಲು ಕುತೂಹಲಕರ ಸಾಮುಗ್ರಿಯನ್ನು ಒದಗಿಸುತ್ತದೆ ಎನ್ನಬಹುದು.

ಕವಿ ಕಾಮ(ಸು. ೧೨೦೦)ನಿಂದ ರಚಿತವಾದ 'ಶೃಂಗಾರ ರತ್ನಾಕರ'ವನ್ನು ಎಸ್. ಜಿ. ನರಸಿಂಹಾಚಾರ್ ಮತ್ತು ಎಂ. ಎ. ರಾಮಾನುಜೈಯಂಗಾರ್ ಅವರು ಪರಿಷ್ಕರಿಸಿ, ಕರ್ಣಾಟಕ ಕಾವ್ಯಮಂಜರಿಯ ೯ನೆಯ ಪುಸ್ತಕವಾಗಿ ಮೈಸೂರಿನಿಂದ ೧೮೯೯ರಲ್ಲಿ ಪ್ರಕಟಿಸಿದರು. ವಿಷಯಾನುಕ್ರಮಣಿಕೆ, ಪೀಠಿಕೆ, ಗ್ರಂಥಪಾಠ ಎಂಬ ಅನುಕ್ರಮದಲ್ಲಿ ಈ ಕೃತಿ ಪ್ರಕಟವಾಗಿದೆ. ಕ ಮತ್ತು ಖ ಎಂಬ ಸಂಕೇತವಿಟ್ಟ ೨ ಹಸ್ತಪ್ರತಿಗಳ ಆಧಾರದ ಮೇಲೆ, ಈ ಪರಿಷ್ಕರಣವನ್ನು ಸಿದ್ಧಮಾಡಿದೆ. ಉಚಿತ ತೋರಿದಂತೆ ಒಂದು ಸಲ ಒಂದನ್ನೂ ಇನ್ನೊಂದು ಸಲ ಇನ್ನೊಂದನ್ನೂ ಬಳಸಿದು ವುದು ಅಡಿಟಿಪ್ಪಣಿಯ ಪಾಠಾಂತರಗಳಿಂದ ತಿಳಿಯುತ್ತದೆ. ಹಸ್ತಪ್ರತಿಗಳ ಸ್ವರೂಪ ತಿಳಿದಿಲ್ಲ. ಸೂತ್ರದ ಆಶಯವನ್ನು ಪದ್ಯಾಂತದಲ್ಲಿ ಸೂಚಿಸುವ ಅಗತ್ಯವಿರಲಿಲ್ಲ. ಒಟ್ಟಿನಲ್ಲಿ ಪರಿಷ್ಕರಣ ಉತ್ತಮವಾಗಿಯೇ ಇದೆ. ಇದರ ಹೊಸ ಪರಿಷ್ಕರಣ ಇನ್ನೂ ಹೊರಬಂದಿರುವಂತೆ ತೋರುವುದಿಲ್ಲ.

ದಂಡಿಯ 'ಕಾವ್ಯಾದರ್ಶದ' ಕನ್ನಡ ಭಾಷಾಂತರವಾದ ಮಾಧವ (ಸು. ೧೫೦೦) ಕೃತ 'ಮಾಧವಾಲಂಕಾರ' ಮುಂದಿನ ಪರಿಶೀಲನೆಯ ಗ್ರಂಥ. ಇದು ಮೈಸೂರು ಕನ್ನಡ ಅಧ್ಯಯನ ಸಂಸ್ಥೆಯ ಒಂದು ಸಮಗ್ರ ಮತ್ತು ಇನ್ನೊಂದು ಅಸಮಗ್ರ—ಹೀಗೆ ೨ ಹಸ್ತಪ್ರತಿಗಳ ಆಧಾರದಿಂದ ಡಾ|| ಎಚ್. ತಿಪ್ಪೇರುದ್ರಸ್ವಾಮಿ ಅವರಿಂದ ಸಂಪಾದಿತವಾಗಿ ೧೯೭೪ರಲ್ಲಿ ಮೈಸೂರಿನಲ್ಲಿ ಪ್ರಕಟವಾಗಿದೆ. ಬಳಸಿದ ಹಸ್ತಪ್ರತಿಗಳಲ್ಲಿ ಸಮಸ್ಯೆಗಳೂ ಸಂದಿಗ್ಧತೆಗಳೂ ಇವೆಯೆಂದೂ ಇದನ್ನು ಪರಿಹರಿಸಲು ಮೂಲಗ್ರಂಥವಾದ 'ಕಾವ್ಯಾದರ್ಶ'ದ ಸಹಾಯವನ್ನು ಪಡೆದಿದೆಯೆಂದೂ ಸಂಪಾದಕರು ತಿಳಿಸಿದ್ದಾರೆ. ಇದು ಅವಶ್ಯವೆಂಬುದರಲ್ಲಿ ಸಂದೇಹವೇನಿಲ್ಲ.

ಯಾವ ಕಾರಣದಿಂದಲೋ ಏನೋ, ಛಂದೋದೋಷಗಳು, ಪದಚ್ಛೇದಾದಿ ದೋಷಗಳು, ಸಾಮಾನ್ಯ ಲಿಪಿಕಾರಸ್ಖಾಲಿತ್ಯಗಳು ಇವೆಲ್ಲ ಕೆಲವು ಕಡೆಗಳಲ್ಲಿ ಹಾಗೆಯೇ ಉಳಿದು ಹೋಗಿರುವುದರಿಂದ ಅಲ್ಲಲ್ಲಿ ಪದ್ಯಗಳು ಅರ್ಥವಾಗುವುದು ಕಷ್ಟವಾಗಿದೆ. ಅಲ್ಲದೆ, ಎಷ್ಟೋ ದೋಷಯುಕ್ತ ಹಾಗೂ ಸಂದಿಗ್ಧ ಆಶಯದ ಪದ್ಯ ಗಳನ್ನು ತಿದ್ದಿ ನೇರ್ಪಡಿಸುವುದಕ್ಕೆ, ತ್ರುಟಿತಗಳನ್ನು ಪೂರೈಸುವುದಕ್ಕೆ, 'ಕಾವ್ಯಾ ದರ್ಶ'ದ ಸಹಾಯವನ್ನು ಪಡೆಯಲು ಇನ್ನೂ ಬಹುವಾಗಿ ಅವಕಾಶವಿದೆಯೆಂದು ಹೇಳಬಹುದು. ಇಲ್ಲಿ ಒಂದೆರಡು ಉದಾಹರಣೆಗಳನ್ನು ಎತ್ತಿಕೊಡಬಹುದಾಗಿದೆ:

೧–೩೮ರ ಕಾವ್ಯಭೇದಗಳನ್ನು ಕುರಿತ ಪದ್ಯವನ್ನು ಹೀಗೆ ಪರಿಷ್ಕರಿಸಲಾಗಿದೆ:

ಸಮಸಂದ ಮುಕ್ತಕಂ [ಕುಳ
ಕ]ಮೆಸೆವ ಕೋಶಂ ನೆಗಳ್ದ [ಸಂಘಾತದಿ] ಪಿಂ
ತಮರ್ದಿರ್ಕು ಸರ್ಗಬಂಧಾಂ
ಶಮಾಗಿಯುದರಿಂದೆ ಪೇಳ್ದನವರತಿಶಯಮುಂ ||

ಈ ಪದ್ಯಕ್ಕೆ ಮೂಲವಾದ 'ಕಾವ್ಯಾದರ್ಶ'ದ ಪದ್ಯ ಹೀಗಿದೆ :

ಮುಕ್ತಕಂ ಕುಲಕಂ ಕೋಶಃ ಸಂಘಾತ ಇತಿ ತಾದೃಶಃ
ಸರ್ಗಬಂಧಾಂಶರೂಪತ್ವಾದನುಕ್ತಃ ಪದ್ಯವಿಸ್ತರಃ ||(೧-೧೩)

ಈ ಪದ್ಯದ ಆಶಯವನ್ನು ಕನ್ನಡಿಸಿರಬಹುದಾದ ಮಾಧವನು, ತನ್ನ ಪದ್ಯವನ್ನು ಹೀಗೆ ಬರೆದಿರಬಹುದೆಂದು ತೋರುತ್ತದೆ :

ಸಮಸಂದ ಮುಕ್ತಕಂ [ಕುಳ
ಕ] ಮೆಸೆವ ಕೋಶಂ ನೆಗೆಟ್ದ ಸಂ[ಘಾ]ತ[ಂ] ಪಿಂ
ತಮರ್ದಿರ್ಕು ಸರ್ಗಬಂಧಾಂ
ಶಮಾಗಿಯುದಱಿಂದ ಪೇ[ೞೆ]ನವಱಿತಿಶಯಮುಂ ||

ಹೀಗೆಯೇ ೧-೩೧ರಲ್ಲಿ "ಇತಿಹಾಸ ಕಥಾಸಂಭವ ೧ ವಿಸರಂ ತಾನಕ್ಕು ಸಜ್ಜನಾಶ್ರಯಮುಂ...." ಎಂಬುದನ್ನು "ಇತಿಹಾಸ ಕಥಾಸಂಭವ | ವಿ[ತ]ರಂ ತಾನಕ್ಕು ಸಜ್ಜನಾಶ್ರಯಮುಂ...." ಎಂಬದಾಗಿ ಸರಿಪಡಿಸಿದರೆ, ಪ್ರಾಸಾಕ್ಷರವೂ ಹೊಂದುವುದು, 'ಕಾವ್ಯಾದರ್ಶ'ದ "ಇತಿಹಾಸಕಥೋದ್ಭೂತಮಿತರದ್ವಾ ಸದಾಶ್ರಯಮ್" ಎಂಬ ಆಶಯವನ್ನೂ (೧-೧೫) ಅನುವಾದಿಸಿದಂತಾಗುವುದು.

ಅಷ್ಟಾದರ್ಶ ವರ್ಣನೆಗಳನ್ನು ಕುರಿತು "ಪುರಯಾತ್ರಾರ್ಣವ ಶೈಲಸಿಂಧು..." ಎಂದು ಆರಂಭವಾಗುವ ಪದ್ಯದಲ್ಲಿ (೧—೩೨) 'ಅರ್ಣವ' ಮತ್ತು 'ಸಿಂಧು' ಇವು ಒಂದು ವರ್ಣನಾಂಗವನ್ನು ಹೇಳುವ ಎರಡು ಪದಗಳಾಗಿವೆಯೆಂಬುದರಿಂದ ಕವಿ ಹೀಗೆ ಬರೆದಿರಲಾರನೆಂಬುದು ನಿಶ್ಚಯ. 'ಸಿಂಧು', ನ್ಯಾಯವಾಗಿ 'ಸೀಧು' ಎಂದಿರಬೇಕು. ಆಗ ಆ ಪದ್ಯದಲ್ಲಿ ಬಿಟ್ಟುಹೋಗಿರುವ, 'ಮಧುಪಾನ' ಎಂಬ ಕಾವ್ಯಾದರ್ಶದ ಶಬ್ದಕ್ಕೆ ಅನುವಾದದಲ್ಲಿ ಬೇಕಾಗಿರುವ ಶಬ್ದವೊಂದು ಸಿಕ್ಕಂತೆ ಆಗುವುದು. ಇಲ್ಲಿಯೇ ಮುಂದಿನ ಪದ್ಯ (೧—೩೩) "ಧೃತಧೈರ್ಯಂ ಸೇವ್ಯವೃತ್ತ ಪ್ರಕರವನತಿವಿಸ್ತೀರ್ಣವರ್ಗೋತ್ಕರಂ...." ಎಂಬುದಾಗಿ ಆರಂಭವಾಗಿರುವುದು "ಧೃತಧೈರ್ಯಂ[ಶ್ರ]ವ್ಯವೃತ್ತಪ್ರಕರವನತಿವಿಸ್ತೀರ್ಣ[ಸ]ರ್ಗೋತ್ಕರಂ . . . ." ಎಂಬುದಾಗಿದ್ದರೆ ಮಾತ್ರ "ಸರ್ಗೈರನತಿವಿಸ್ತೀರ್ಣೈಃ ಶ್ರವ್ಯವೃತ್ತೈಃ..." ಎಂಬ ಮಾತಿನ ವಾಕ್ಯಭಾಗ ಹೇಳುವ ಆಶಯಕ್ಕೆ ಸರಿಯಾಗುವುದು ಸಾಧ್ಯ.

ದ್ವಿತೀಯ ಪರಿಚ್ಛೇದದ ಒಂದು ಉದಾಹರಣೆಯನ್ನೂ ಇಲ್ಲಿ ಗಮನಿ
ಬಹುದು: ಅರ್ಥಾಲಂಕಾರದ ಹೇತುಚಕ್ರ ವಿವರಣೆಯನ್ನು ಮಾಡುವಾಗ, ಪ್ರಾ
ಹೇತುವಿಗೆ ಸಂಬಂಧಿಸಿದ ಲಕ್ಷ್ಯವೊಂದು 'ಮಾಧವಾಲಂಕಾರ'ದ ಮುದ್ರಿತ ಪ್ರ
ಯಲ್ಲಿ ಈ ಪ್ರಕಾರವಾಗಿದೆ :

ಪ್ರಿಯನೆಂದು ಕಲ್ಪಿಸಿದರ್ಾ
ಳಿಯನಂಗನೆ ಮಾನಯೋಗ್ಯೆಯಂ ನೋಡಲ್ಕಂ
ನಿಯತಂ ಭ್ರೂಕದಿ(?) ಜಿಹ್ವಾ
ಕ್ಷಿಯಾಗಿ ನಸುನಿತ್ತಲದರಮೀಕ್ಷಿಸುತಿರ್ದಳ್ || (ಪ ೨೩)

ಈ ಪದ್ಯದ ಅಭಿಪ್ರಾಯವೇನೆಂಬುದನ್ನು ನೋಡದೆ ಸುಲಭವಾಗಿ ತಿಳಿಯುವುದ
ಸಾಧ್ಯವಿಲ್ಲ. ಇಲ್ಲಿ ಪಾಠದೋಷಗಳು ಹೆಚ್ಚಾಗಿವೆ. ಸಂವಾದಿಯಾದ ಮೂ
ಪದ್ಯವಿದು :

ಮಾನಯೋಗ್ಯಾಂ ಕರೋಮೀತಿ ಪ್ರಿಯಸ್ಥಾನಸ್ಥಿತಾಂ ಸಖೀಮ್
ಬಾಲಾ ಭ್ರೂಭಂಗಜಿಹ್ಮಾಕ್ಷೀ ಪಶ್ಯತಿ ಸ್ಫುರಿತಾಧರಾ || (೨—೨೪೩)

ಈ ಬಾಹ್ಯಸಾಕ್ಷ್ಯವನ್ನು ಸಹಾಯಕ್ಕಿಟ್ಟುಕೊಂಡು, ಮೇಲಿನ ಪದ್ಯವನ್ನು ಹೀ
ಪರಿಷ್ಕರಿಸಬಹುದು :

ಪ್ರಿಯನೆಂದು ಕಲ್ಪಿಸಿದರ್ಾ
[ಳಿ]ಯನಂಗನೆ ಮಾನಯೋಗ್ಯೆಯಂ [ಮಾ]ಡಲ್ಕಂ
ನಿಯತಂ ಭ್ರೂ [ಕುಟಿ] ಜಿಹ್ಮಾ
ಕ್ಷಿಯಾಗಿ ನಸು[ಗೆ]ತ್ತಲ[ಧ]ರಮೀಕ್ಷಿಸುತಿರ್ದಳ್ ||

ಇವೆಲ್ಲ ಬಾಹ್ಯಸಾಕ್ಷ್ಯಗಳನ್ನು ಅವಲಂಬಿಸಿದ ಊಹಾತ್ಮಕ ಪಾಠಪರಿಷ್ಕರ
ಗಳ ಕೆಲವು ಸಂದರ್ಭಗಳಾಗಿವೆ. ಲಿಪಿಕಾರಲೇಖನಸಂಭಾವ್ಯತೆಯ ದೃಷ್ಟಿಯಿಂದಲ
ಈ ಪರಿಷ್ಕರಣಗಳು ಸಮರ್ಥನೀಯವಾಗಿವೆ. ಇಂಥ ಉದಾಹರಣೆಗಳನ್ನು ಇನ್ನೂ
ಕೊಡಬಹುದಾಗಿದೆ. ಪ್ರಸ್ತುತ 'ಮಾಧವಾಲಂಕಾರ'ದ ಇನ್ನೊಂದು ಸಾರ್ಥ
ಪರಿಷ್ಕರಣದ ಅಗತ್ಯವಿದೆ; ಅದನ್ನು ಈ ಪರಿಷ್ಕರಣದ ಸಂಪಾದಕರೇ ಮಾಡಿಕೊಡಲ
ಸಮರ್ಥರೆಂದು ನಾನು ಭಾವಿಸುತ್ತೇನೆ, ಮಾಡಿ ಕೊಡುವರೆಂದೂ ಆಶಿಸುತ್ತೇನೆ.

ಸಾಳ್ವ (ಸು. ೧೫೫೦) ಕೃತವಾದ 'ರಸರತ್ನಾಕರ' (ಮತ್ತು 'ಶಾರದ
ವಿಲಾಸ') ಎ. ವೆಂಕಟರಾವ್ ಮತ್ತು ಎಚ್. ಶೇಷ ಅಯ್ಯಂಗಾರ್ ಅವರಿಂ
ಸಂಪಾದಿತವಾಗಿ ಮದ್ರಾಸು ವಿಶ್ವವಿದ್ಯಾನಿಲಯದಿಂದ ೧೯೩೨ ರಲ್ಲಿ ಪ್ರಕಟವಾಗಿದೆ
ಮತ್ತೆ ೧೯೭೫ರಲ್ಲಿ ಇದು ಪುನರ್ಮುದ್ರಣಗೊಂಡಿದೆ. ವಿಷಯಸೂಚಿಕೆ, ಅವತರಣಿಕೆ

ಗ್ರಂಥಪಾಠ, ದ್ವಿತೀಯ ಪ್ರಕರಣ ಮಾತ್ರ ಉಪಲಬ್ಧವಾಗಿರುವ 'ಶಾರದಾವಿಲಾಸ'ದ ಗ್ರಂಥಪಾಠ, ಹಲವು ಪರಿಶಿಷ್ಟಗಳು—ಈ ಅನುಕ್ರಮದಲ್ಲಿ ಈ ಗ್ರಂಥ ಮುದ್ರಿತ ವಾಗಿದೆ.

ಈ ಪರಿಷ್ಕರಣದ ಸಿದ್ಧತೆಯಲ್ಲಿ ಪದ್ಮರಾಜ ಪಂಡಿತರ ಒಂದು ಓಲೆಪ್ರತಿ, ಮೈಸೂರು ಪ್ರಾಚ್ಯ ಕೋಶಾಗಾರದ ಎರಡು ಓಲೆಪ್ರತಿಗಳು, ಮದ್ರಾಸು ಪ್ರಾಚ್ಯ ಕೋಶಾಗಾರದ ಎರಡು ಪ್ರತಿಗಳು, ಮೈಸೂರು ಟ್ರೈನಿಂಗ್ ಕಾಲೇಜ್ ಗ್ರಂಥ ಭಂಡಾರದ ಕಾಗದದ ಪ್ರತಿ—ಇವನ್ನು ಇಟ್ಟುಕೊಂಡಿರುವುದು ಕಾಣುತ್ತದೆ. ಇವು ಗಳಲ್ಲಿ ಪಾಠವು ಬಹಳ ಮಟ್ಟಿಗೆ ಶುದ್ಧವಾಗಿದೆಯೆಂದು ಕಂಡ ಪದ್ಮರಾಜ ಪಂಡಿತರ ಓಲೆಪ್ರತಿಯನ್ನು ವಿಶೇಷವಾಗಿ ಬಳಸಿದೆಯೆಂದು ತಿಳಿಯುತ್ತದೆ. ಪ್ರತಿಗಳ ಸಾಮಾನ್ಯ ಸ್ವರೂಪವನ್ನು ತಿಳಿಸಿದೆಯಲ್ಲದೆ, ಪರಸ್ಪರ ತುಲನೆ, ಪೀಳಿಗೆಯ ರಚನೆ ಇತ್ಯಾದಿ ಗಳನ್ನು ತಿಳಿಸಿಲ್ಲ.

ಪರಿಶಿಷ್ಟ ೬ರಲ್ಲಿರುವ ಹಸ್ತಪ್ರತಿಗಳ ಭಿನ್ನ ಭಿನ್ನ ಪಾಠಗಳು ಯಾವ ಯಾವ ಸಂಕೇತದ ಪ್ರತಿಗೆ ಸೇರಿದುವೆಂಬುದನ್ನು ಸೂಚಿಸದಿರುವುದು ಒಂದು ದೊಡ್ಡ ಕೊರತೆ. ಆದ್ದರಿಂದ ಆಯಾ ಪ್ರತಿಗಳ ಬೆಲೆಯೇನು, ಪ್ರಯೋಜನ ಹೇಗೆ ಎಂಬುದು ತಿಳಿಯುವುದಿಲ್ಲ. ಕೆಲವು ಕಡೆ ಪಾಠಾಂತರ ಸೂಚನೆಗಳನ್ನು, ಪಾಠಗಳ ನ್ಯೂನಾಧಿಕ್ಯಗಳನ್ನು, ಕೆಲವು ವಿಶೇಷಾಂಶಗಳನ್ನು ಅಡಿಟಿಪ್ಪಣಿಗಳಲ್ಲಿ ಸೂಚಿಸಿರುವು ದುಂಟು. ಒಂದೊಂದೆಡೆ ರ-ಱಕಾರಗಳ ಶಬ್ದರೂಪಗಳಲ್ಲಿ, ಪದಚ್ಛೇದದಲ್ಲಿ ದೋಷ ಗಳು ಕಾಣುತ್ತವೆಯಾದರೂ ಒಟ್ಟಿನಲ್ಲಿ ಪರಿಷ್ಕರಣ ಉತ್ತಮವಾಗಿದೆ. ಗ್ರಂಥಶರೀರ ದಲ್ಲಿಯೇ, ಪ್ರಾಯಃ ಕವಿಲಿಖಿತವಲ್ಲದ, ಸೂತ್ರವಸ್ತುಸೂಚನೆ ಇತ್ಯಾದಿಗಳನ್ನು ಕೊಡುವ ಆವಶ್ಯಕತೆಯೇನೂ ಇರಲಿಲ್ಲವೆನ್ನಬೇಕು.

'ರಸರತ್ನಾಕರ' (ಮತ್ತು 'ಶಾರದಾವಿಲಾಸ')ದ ಇನ್ನೊಂದು ಪರಿಷ್ಕರಣ ಮೈಸೂರಿನ ಕನ್ನಡ ಅಧ್ಯಯನ ಸಂಸ್ಥೆಯ ಮೂಲಕ ೧೯೭೬ರಲ್ಲಿ ಹೊರಬಂದಿದೆ. ಇದರ ಸಂಪಾದಕರು ಎಚ್.ಕೆ. ನರಸಿಂಹೇಗೌಡರು. ಈ ಪರಿಷ್ಕರಣದ ಸಿದ್ಧತೆಯಲ್ಲಿ ಮದ್ರಾಸು ಪರಿಷ್ಕರಣಕರ್ತರು ಬಳಸಿದ ಪಾಠಸಾಮಗ್ರಿಯನ್ನೇ ಮುಖ್ಯವಾಗಿ ಬಳಸಿದೆ; ಜೊತೆಗೆ ಇನ್ನೊಂದು ಪ್ರತ್ಯೇಕ ಹಸ್ತಪ್ರತಿಯನ್ನೂ ಬಳಸಿದೆ. ಆದರೆ ಮದ್ರಾಸು ಪರಿಷ್ಕರಣದಲ್ಲಿ ಆ ಸಂಪಾದಕರಿಂದ ಸಿದ್ಧವಾದ ಪಾಠಗಳನ್ನೇ ಸಾಮಾನ್ಯವಾಗಿ ಒಪ್ಪಿರುವುದರಿಂದ, ಆ ಪರಿಷ್ಕರಣವನ್ನು ಕವಿಪಾಠದ ದೃಷ್ಟಿ ಯಿಂದ ಇಲ್ಲಿ ಉತ್ತಮಪಡಿಸಿರುವಂತೆ ತೋರುವುದಿಲ್ಲ. ಅಲ್ಲದೆ ಆ ಪರಿಷ್ಕರಣದ ಕೊನೆಗೆ ಕೊಟ್ಟಿರುವ ಪಾಠಾಂತರಗಳನ್ನೆಲ್ಲ ಒಟ್ಟಾಗಿ ಒಂದೇ ಸಂಕೇತವಿಟ್ಟು, ಒಂದೇ ಪ್ರತಿಯ ಪಾಠಾಂತರಗಳೆಂಬಂತೆ ಇಲ್ಲಿ ತೋರಿಸಿರುವುದಂತೂ ಆಕ್ಷೇಪಣೀಯ ವಾದದ್ದು. ಇದರ ಹಾಗೆಯೇ ಹಿಂದಿನ ಪರಿಷ್ಕರಣದ ಅವತರಣಿಕೆಯ ಶೋಧನೆ ಗಳನ್ನೂ ವಿಷಯನ್ಯಾಸವನ್ನೂ ಇಲ್ಲಿ, ಪೀಠಿಕೆಯ ಭಾಗದಲ್ಲಿ, ತಕ್ಕ ಸೂಚನೆ

ವಿವರಣೆಗಳಿಲ್ಲದೆ (ಸ್ವಲ್ಪಭಾಗದಲ್ಲಿ ಉದ್ಧರಣಚಿಹ್ನೆಗಳೇನೋ ಇವೆ) ಬಳಸಿರುವು
ಸಹ ಒಪ್ಪತಕ್ಕದ್ದಲ್ಲ ಎಂದು ಹೇಳಬೇಕಾಗಿದೆ. ಪಾಠನಿಷ್ಕರ್ಷೆ, ಪಾಠವಿಮರ್ಶೆ
ಟಿಪ್ಪಣಿಗಳಲ್ಲಿ ಸಹ, ಕೆಲವು ಕಡೆ 'ಮ' ಎಂದು ಸೂಚಿಸಿರುವುದರ ಹೊರ
ಮೇಲೆ ಹೇಳಿರುವಂತೆಯೇ ಆಗಿದೆ.

ತಿಮ್ಮನ (ಸು. ೧೬೦೦) 'ನವರಸಾಲಂಕಾರ' ಇನ್ನೂ ಬೆಳಕು ಕಂಡಿ
ಆರ್. ನರಸಿಂಹಾಚಾರ್ಯರು ಅದರ ಭಾಗಗಳನ್ನು ತಮ್ಮ 'ಕರ್ಣಾಟಕ ಕವಿಚ
ಯಲ್ಲಿ ಉದ್ಧರಿಸಿ ಕೊಟ್ಟಿದ್ದಾರೆ.

ತಿರುಮಲಾರ್ಯ ಕೃತವಾದ 'ಅಪ್ರತಿಮವೀರಚರಿತ' ಎಸ್. ಜಿ. ನರಸಿಂ
ಚಾರ್ಯ ಮತ್ತು ಎಂ. ಎ. ರಾಮಾನುಜ ಅಯ್ಯಂಗಾರ್ಯ ಇವರಿಂದ ಸಂಪಾ
ವಾಗಿ (ಗ್ರಂಥದಲ್ಲಿ 'ಪರಿಷ್ಕರಿಸಲ್ಪಟ್ಟು' ಎಂದಿದೆ), ಕರ್ಣಾಟಕ ಕಾವ್ಯಮಂಜ
ಲನೆಯ ಪುಸ್ತಕವಾಗಿ, ೧೯೬೩ರಲ್ಲಿ ಮೈಸೂರಿನಿಂದ ಪ್ರಕಟವಾಗಿದೆ. ಆರಂಭ
ಪ್ರಕರಣಾನುಸಾರವಾದ, ವಿವರವಾದ ವಿಷಯಾನುಕ್ರಮಣಿಕೆ ಮಾತ್ರವಿದೆ. '
ಪ್ರತಿಗಳಲ್ಲಿ ಗ್ರಂಥಪಾತ' ಎಂಬಂತಹ (ಪು. ೪೩) ಸೂಚನೆಯಿಂದ ಪರೋಕ್ಷ
ಒಂದಕ್ಕಿಂತ ಹೆಚ್ಚಾಗಿ ಪ್ರತಿಗಳನ್ನು ಉಪಯೋಗಿಸಿದೆ ಎಂದು ತಿಳಿಯುವುದಲ್ಲದೆ,
ಪ್ರತಿಗಳ ವಿವರ, ಸಂಕೇತ ಇತ್ಯಾದಿ ವಿವರಗಳನ್ನು ಗ್ರಂಥಾರಂಭದಲ್ಲಿ ಸಂಪಾದ
ಸೂಚಿಸಿಲ್ಲ. ಶಬ್ದಗಳ ಸಾಮಾನ್ಯ ರೂಪಗಳಲ್ಲಿ ಱ-ೞ ಅಕ್ಷರಗಳ ಸಂಘಟನೆ
ಶಬ್ದರೂಪಗಳಲ್ಲಿ, ಅಲ್ಲಲ್ಲಿ ಸ್ಖಾಲಿತ್ಯಗಳೂ ಉಂಟು. ಕೊನೆಗೆ ಪದ್ಯಾನುಕ್ರಮ
ಇದೆ.

ಇದೇ ಗ್ರಂಥದ ದ್ವಿತೀಯ ಮುದ್ರಣ ಎಂ. ಎ. ರಾಮಾನುಜ ಅಯ್ಯಂಗಾ
ರಿಂದ 'ಪರಿಶೋಧಿತವಾಗಿ' ೧೯೩೧ರಲ್ಲಿ ಮೈಸೂರಿನಿಂದಲೇ ಪ್ರಕಟವಾ
ಇದರಲ್ಲಿ ಕವಿಚರಿತ್ರೆ, ಕವಿಯ ಇತರ ಕೃತಿಗಳು— ಇವನ್ನು ಕುರಿತ ಒಂದು
ಉಪೋದ್ಘಾತವಿದೆ. ವಿಷಯಾನುಕ್ರಮಣಿಕೆಯೂ ಇದೆ. ಆದರೆ ಹಸ್ತ
ವಿವರಗಳಿಲ್ಲ. ಈ ಪರಿಷ್ಕರಣದಲ್ಲಿ ಕೆಲವು ಸಾಮಾನ್ಯ ಸ್ಖಾಲಿತ್ಯಗಳನ್ನೂ
ಘಟಿತ ಶಬ್ದರೂಪಗಳ ಸಂದಿಗ್ಧತೆಗಳನ್ನೂ ಪದಚ್ಛೇದಗಳ ಅಸಮರ್ಪಕತೆಗಳ
ಹೋಗಲಾಡಿಸಿದೆ.

ಹಲವು ವರ್ಷಗಳ ಮೇಲೆ, ಈಚೆಗೆ ೧೯೭೨ರಲ್ಲಿ ಕೋಣನೂರು ನರಸಿಂಹ
ಮತ್ತು ಜಿ. ಆರ್. ಶ್ರೀನಿವಾಸಯ್ಯಂಗಾರ್ ಇವರು ಪೀಠಿಕೆ ಟಿಪ್ಪಣಿಗಳಿಂದ ಕೂ
ಪರಿಷ್ಕರಣವೊಂದನ್ನು ಪ್ರಕಟಿಸಿದ್ದಾರೆ. ಹಿಂದೆ ಮುದ್ರಿತವಾದ ಪರಿಶೋ
ಮುದ್ರಣವನ್ನೇ ಬಳಸಿರುವಂತೆ ತೋರುವುದು. ಆದರೆ ಪಾಠಾಂತರಗ
ತೋರಿಸಿಲ್ಲ. ಹಸ್ತಪ್ರತಿ ಸಂಬಂಧದ ವಿವರಗಳೂ ಇಲ್ಲ, ಕೆಲವು ಕಡೆ
ಪದಚ್ಛೇದ ದೋಷಗಳು ಉಳಿದುಕೊಂಡಿವೆ.

ಜಾಯೇಂದ್ರ / ಜಾಯಗೌಂಡ ವಿರಚಿತವಾದ 'ಕರ್ಣಾಟಕ ಕುವಲಯಾನಂದ' (೧೭೩೪) ಶಿ. ಜಿ. ನಂದೀಮಠರಿಂದ ಸಂಪಾದಿತವಾಗಿ, ಅವರಿಂದಲೇ ೧೯೭೦ರಲ್ಲಿ ಧಾರವಾಡದಿಂದ ಪ್ರಕಟವಾಗಿದೆ. ಶ್ರೀಯುತರು ಆರಂಭದ ನಿವೇದನೆಯಲ್ಲಿ, ತಮಗೆ ಲಭ್ಯವಾದ ಎರಡು ಅಶುದ್ಧ ಹಸ್ತಪ್ರತಿಗಳಲ್ಲಿ, ೧೭೮೫ರಲ್ಲಿ ಲಿಖಿತವಾದ ಒಂದು ಕಾಗದಪ್ರತಿಯನ್ನು ಆಶ್ರಯಿಸಿ ಪ್ರಸ್ತುತ ಪರಿಷ್ಕರಣವನ್ನು ಸಿದ್ಧ ಮಾಡಿರುವುದಾಗಿ ತಿಳಿಸಿದ್ದಾರೆ. 'ಸಾಧ್ಯವಾದ ಮಟ್ಟಿಗೆ ತಿದ್ದಿ ಮುದ್ರಿಸಿ' ಪ್ರಕಟಿಸಿರುವುದು ನಿಜವೇ ಆದರೂ ಇನ್ನೂ ಕೆಲವು ಲಿಪಿಕಾರಸ್ಖಾಲಿತ್ಯಗಳನ್ನು ಹಾಗೆಯೇ ಉಳಿಸಿರುವುದು ಏಕೆಂದು ತಿಳಿಯದು. ಅಲ್ಲದೆ ಎಷ್ಟೇ ಅಶುದ್ಧವಾಗಿದ್ದರೂ ಇನ್ನೊಂದು ಹಸ್ತಪ್ರತಿಯನ್ನೂ (ಕೆ. ಎ. ೩೦ ; ಮೈಸೂರು ಪ್ರಾಚ್ಯಕೋಶಾಗಾರದ ಹಸ್ತಪ್ರತಿ) ಬಳಸಿಕೊಂಡು, ಕೆಲವೆಡೆಗಳಲ್ಲಾದರೂ ಉಪಯುಕ್ತ ಪಾಠಾಂತರಗಳನ್ನು ಸೂಚಿಸಬಹುದಾಗಿದ್ದಿತು.

ಇನ್ನೊಂದು ಸಂಗತಿ : ಸಂಪಾದಕರು ಗ್ರಂಥದ ಮೊದಲಿಗೆ ಸು. ೨೦೦ ಪುಟಗಳ ವಿಸ್ತೃತ ಉಪೋದ್ಘಾತವನ್ನು ಬರೆದಿದ್ದಾರೆ. ಇದು ಸಂಸ್ಕೃತ ಮತ್ತು ಕನ್ನಡ ಅಲಂಕಾರಶಾಸ್ತ್ರಗಳ ಪರಿಚಯ, ಅಲಂಕಾರಶಾಸ್ತ್ರದ ವಿವಿಧ ಪ್ರಸ್ಥಾನಗಳ ವಿವೇಚನೆ ಹಾಗೂ ಕನ್ನಡ ಛಂದಸ್ಸಿನ ವಿವಿಧ ಪದ್ಯಜಾತಿಗಳ ಲಕ್ಷಣನಿರೂಪಣೆ ಇವನ್ನು ಒಳಕೊಂಡಿದೆ. ಈ ಭಾಗವನ್ನು ಸೇರಿಸದೆ, ಕವಿ ಹಾಗೂ ಕೃತಿಗೆ ತೀರ ಪ್ರಸ್ತುತವಾದ ಸಂಗತಿಗಳನ್ನು ಮಾತ್ರವೇ ಹೇಳಿದ್ದರೂ ಸಾಕಾಗುತ್ತಿದ್ದಿತು. ಆದರೆ ಗ್ರಂಥಾಂತ್ಯದ ಟಿಪ್ಪಣಿಗಳು ಉಪಯುಕ್ತವಾಗಿವೆ.

ಜಾಯೇಂದ್ರನೇ ರಚಿಸಿದ 'ಶೃಂಗಾರತಿಲಕ' (='ರಸಮಂಜರಿ') ಲಭ್ಯವಾಗಿದ್ದರೂ ಇನ್ನೂ ಪ್ರಕಟವಾಗಿರುವಂತೆ ತೋರುವುದಿಲ್ಲ.

ಕೊನೆಯದಾಗಿ ಇಲ್ಲಿ ಎತ್ತಿಕೊಳ್ಳಬಹುದಾದ ಕೃತಿ 'ನರಪತಿಚರಿತ'. ಇದರ ಕರ್ತೃ ಮುಮ್ಮಡಿ ಕೃಷ್ಣರಾಜ ಒಡೆಯರ ಅಳಿಯ ಲಿಂಗರಾಜೇ ಅರಸು. ಈ ಗ್ರಂಥದ ಪರಿಷ್ಕರಣವನ್ನು ಜಯರಾಯಾಚಾರ್ಯರು ಸಿದ್ಧಮಾಡಿದ್ದು, ೧೮೯೯ರಲ್ಲಿ ಮೈಸೂರಿನಿಂದ ಕರ್ನಾಟಕ ಗ್ರಂಥಮಾಲೆಯ ೧೯ನೆಯ ಪುಸ್ತಕವಾಗಿ ಇದು ಪ್ರಕಟವಾಗಿದೆ.

'ನರಪತಿಚರಿತ'ದ ಕರ್ತೃವಿನ ನೇರ ಪೋಷಣೆಯ ಕವಿಗಳಲ್ಲಿ ಒಬ್ಬರಾಗಿದ್ದ, ಅರಮನೆಯ ವಿದ್ವಾಂಸರೂ ಆಗಿದ್ದ, ಜಯರಾಯಾಚಾರ್ಯರು ಕರ್ತೃವಿನ ಮಗನಿಂದ ಆ ಗ್ರಂಥದ ಒಂದು ಪ್ರತಿಯನ್ನು ಪಡೆದುಕೊಂಡು, ಅದನ್ನು ಸಂಪಾದಿಸಿದರೆಂದು ತಿಳಿಯುವುದು. "ಈ ಪುಸ್ತಕವು ಬಹಳ ಚಿತ್ತಾಗಿ ಪರಿಷ್ಕರಿಸುವುದಕ್ಕೆ ಅಸಾಧ್ಯವಾಗಿತ್ತು. ಆದರೂ ಈ ಗ್ರಂಥವನ್ನು ನಾನು ಆ ಕವಿಯ ಸಮಕ್ಷಮದಲ್ಲಿಯೇ ಕೆಲವಾವರ್ತಿ ಓದಿ ಹೇಳುತ್ತಿದ್ದೆನಾದ ಕಾರಣ, ಯಾವ ಯಾವ ಅಂಶವು ಲೋಪವಾಗಿದ್ದುವೋ ಅವುಗಳನ್ನೆಲ್ಲಾ ನನಗೆ ತಿಳಿವಳಿಕೆ ಇರುವ ಮಟ್ಟಿಗೂ

ಪರಿಷ್ಕರಿಸಿ ಅಚ್ಚು ಹಾಕಿಸಿರುತ್ತೇನೆ. ಇದರಲ್ಲಿ ಏನಾದರೂ ಪ್ರಮಾದವಶಾ
ಅಶುದ್ಧಗಳು ಇದ್ದಲ್ಲಿ ಮಹನೀಯರಾದ ವಾಚಕರೆಲ್ಲರೂ ನನಗೆ ತಿಳಿಸಬೇಕೆಂದ
ಬಹು ವಿನಯವಾಗಿ ಪ್ರಾರ್ಥಿಸುತ್ತೇನೆ." ಹೀಗೆ ತಿಳಿಸಿರುವುದರಿಂದ ಕೃತಿಯ
ಸಂಪಾದನೆಯಲ್ಲಿ ಈ ಪರಿಷ್ಕರಣಕರ್ತರ ಕೈವಾಡ ಸ್ಪಷ್ಟವಾಗಿಯೇ ಇರುವುದೆಂದ
ಹೇಳಬೇಕಾಗಿದೆ.

ಕವಿಯ ಚರಿತ್ರೆ, ಆತನ ಕೃತಿಗಳ ಹೆಸರುಗಳು ಇವನ್ನು ಕುರಿತ ಚಿ
ಪೀಠಿಕೆ, ಅಲಂಕಾರಾನುಕ್ರಮಣಿ ಇವು ಉಚಿತವಾಗಿ ಸೇರಿವೆಯಾದರೂ ಈ ಗ್ರಂ
'ಅಪ್ರತಿಮವೀರಚರಿತ'ದ ಮಾದರಿಯಲ್ಲಿ ರಚಿತವಾಗಿರುವುದರಿಂದ, ಅದರೊಂದಿ
ತೌಲನಿಕ ವಿವೇಚನೆ ಸೇರಬಹುದಾಗಿದ್ದಿತು; ಆಕರಗಳನ್ನು ಗುರುತಿಸಬಹುದಾ
ದ್ದಿತು. ಉದಾಹರಣೆಗೆ, ವೃತ್ತಿಭಾಗದಲ್ಲಿ 'ಶಬ್ದಮಣಿ ದರ್ಪಣ'ದ ಸೂತ್ರ
ಗಳನ್ನು ಉದ್ಧರಿಸಿರುವುದನ್ನು ಇಲ್ಲಿ ಸೂಚಿಸಬಹುದು. ಹೀಗೆಯೇ ಮುಮ್ಮ
ಕೃಷ್ಣರಾಜ ಒಡೆಯರ ಕಾಲದ ಐತಿಹಾಸಿಕ ಸಂಗತಿಗಳನ್ನೂ ಆ ದೊರೆಯ ವ್ಯಕ್ತಿಗ
ಚರಿತ್ರೆಯ ವಿವರಗಳನ್ನೂ ಹೆಕ್ಕಿ ತೆಗೆಯಬಹುದಾಗಿದ್ದಿತು.

ಇನ್ನು ಪರಿಷ್ಕರಣಕ್ಕೆ ಸಂಬಂಧಿಸಿದಂತೆ ಹೇಳಬಹುದಾದರೆ, ಅಲಂಕಾ
ಗಳನ್ನು ಸೂಚಿಸುವ ಶೀರ್ಷಿಕೆಗಳನ್ನು ಗ್ರಂಥಶರೀರದಲ್ಲಿಯೇ ತೋರಿಸಿರುವುದ
ಸಮರ್ಪಕವೆನ್ನುವಂತಿಲ್ಲ. ಉಚಿತಸ್ಥಾನಗಳಲ್ಲಿ 'ಅ'ಕಾರವನ್ನಾದರೂ ಯೋಜಿಸ
ವುದು ಭಾಷಾದೃಷ್ಟಿಯಿಂದ ಪ್ರಾಯಃ ಅವಶ್ಯವಿದ್ದಿತು. ಅಲ್ಲದೆ ಅನೇಕ ಶ
ಶಾಸನಗಳನ್ನು ಅಚ್ಚು ಮಾಡಿಸುವಂತೆ ಲಕ್ಷಣಪದ್ಯಗಳನ್ನು ಅನುಸ್ಯೂತವಾ
ಅಚ್ಚುಮಾಡಿಸಿದೆ. ಇದರ ಪ್ರತಿಯಾಗಿ ಈಗಿನ ಕ್ರಮದಂತೆ ಅಚ್ಚು ಮಾಡಿಸಿದ್ದರೆ
ಓದುಗರಿಗೆ ಹೆಚ್ಚಿನ ಸೌಕರ್ಯವನ್ನು ಕಲ್ಪಿಸಿದಂತೆ ಆಗುತ್ತಿದ್ದಿತು.

ಈವರೆಗೆ ಕನ್ನಡ ಅಲಂಕಾರಗ್ರಂಥಗಳ ಸಂಪಾದನೆಯ ಒಂದು ಸಂಕ್ಷಿ
ಅವಲೋಕನವನ್ನು ಮಾಡಿದಂತೆ ಆಯಿತು. ಇವುಗಳಲ್ಲಿ ಹೆಚ್ಚಿನವು ಒಂದೆರಡ
ಇಲ್ಲವೆ ಕೇವಲ ಕೆಲವೇ ಹಸ್ತಪ್ರತಿಗಳ ಆಧಾರದ ಮೇಲೆ ಸಂಪಾದಿತವಾಗಿರುವುದ
ತಿಳಿಯುತ್ತದೆ. ಹೆಚ್ಚಿನವುಗಳ ಸಂಬಂಧದಲ್ಲಿ, ದೊರೆತಿರುವ ಹಸ್ತಪ್ರತಿಗಳು ತುಂ
ಅಶುದ್ಧವಾಗಿರುವುದೂ ತಿಳಿದಿದೆ. ತ್ರುಟಿತ ಭಾಗಗಳಿಂದ ವಿಕ್ಷಿಪ್ತಗೊಂಡಿರುವ ಹಸ್ತ
ಪ್ರತಿಗಳಿಂದ, ಒಂದೆರಡು ಅಲಂಕಾರಗ್ರಂಥಗಳು ತಮ್ಮ ಮೂಲಸ್ವರೂಪವನ್ನ
ಕಳೆದುಕೊಂಡಿವೆ. ಇದರಿಂದ ಈ ಶಾಖೆಯ ಲಕ್ಷಣಗ್ರಂಥಗಳ ಸಂಪಾದನ ಕಾರ್ಯದ
ತೊಡಕುಗಳು ಹೆಚ್ಚು, ಸಂಪಾದಕರು ನಿರ್ವಹಿಸಬೇಕಾದ ಜವಾಬ್ದಾರಿ ಹೆಚ್ಚ
ಎನ್ನುವುದು ಸ್ಪಷ್ಟವೇ ಇದೆ. 'ಕಾವ್ಯಾವಲೋಕನ', 'ಅಪ್ರತಿಮವೀರಚರಿತ
ಗಳನ್ನು ಹೊರತುಪಡಿಸಿ ಬಹುಪಾಲು ಎಲ್ಲ ಅಲಂಕಾರಗ್ರಂಥಗಳಿಗೂ ಹಸ್ತಪ್ರ
ಸಂಬಂಧದ ಹಲವು ಸಮಸ್ಯೆಗಳ ಕೋಟಲೆಯಿದೆ. ಕೋಟಲೆ ಹೆಚ್ಚು ಬಾಧಿಸದ
ಇರುವ ಗ್ರಂಥಗಳಲ್ಲಿ ಸುಬೋಧವಾದ ಪಾಠಗಳಿಂದ ಕೂಡಿರುವುವೆಂದು 'ಕವಿರಾ

ಮಾರ್ಗ' (ಇಲ್ಲಿಯೂ ದುಷ್ಕರಕಾವ್ಯದ ಪಾಠ ದುರ್ಬೋಧವಾದ್ದು) 'ಶೃಂಗಾರ ರತ್ನಾಕರ', 'ರಸರತ್ನಾಕರ'ಗಳ ಹಸ್ತಪ್ರತಿಗಳನ್ನು ಎತ್ತಿ ಹೇಳಬಹುದು ; ಮಿಕ್ಕವುಗಳಲ್ಲಿ ಪಾಠಕ್ಲೇಶಗಳೋ ಇತರ ವಿಧದ ದೋಷಗಳೋ ಇವೆಯೆಂಬುದು ಸುವಿದಿತ.

ಇಲ್ಲಿ ಕೆಲವು ಸಾಮಾನ್ಯ ಸೂಚನೆಗಳನ್ನು ಪ್ರಸ್ತಾವಿಸಬಹುದು :

(೧) ಛಂದೋಗ್ರಂಥಗಳ ವಿಷಯದಲ್ಲಿ ನೋಡಿದಂತೆ, ಇಲ್ಲಿಯೂ ಗ್ರಂಥ ಸಂಪಾದನಶಾಸ್ತ್ರದ ವಿಧಿವತ್ತಾದ ಕ್ರಮಗಳನ್ನು ಅನುಸರಿಸಿ ಪಾಠನಿಷ್ಕರ್ಷೆಗೆ ಪ್ರಯತ್ನಪಡಬೇಕೆಂದೂ ಅದು ಸಾಧ್ಯವಿಲ್ಲವಾದರೆ ಅಗತ್ಯವಿದ್ದಮಟ್ಟಿಗಾದರೂ ಆ ಕ್ರಮಗಳನ್ನು ಅನ್ವಯಿಸಿ ಉತ್ತಮ ತಾತ್ಕಾಲಿಕ ಪರಿಷ್ಕರಣವನ್ನಾದರೂ ಹೊರತರಬೇಕೆಂದೂ ಹೇಳಬೇಕಾಗಿದೆ.

ಈಗ ತಿಳಿದಮಟ್ಟಿಗೆ ನಮ್ಮ ಅಲಂಕಾರಗ್ರಂಥಗಳ ಸಂಪಾದನೆ, ಅವುಗಳ ಗ್ರಂಥೋಪಯುಕ್ತ ವಸ್ತುವಿವರಗಳ ಪೂರಣೆ, ಸಂಸ್ಕೃತ ಭಾಷೆಯ ಆ ಬಗೆಯ ಗ್ರಂಥಗಳ ಸಂಪಾದನೆಯಲ್ಲಿ ಕಂಡುಬಂದಿರುವಷ್ಟು ಕ್ರಮಬದ್ಧವಾಗಿದೆ, ಸಂಪನ್ನವಾಗಿದೆ ಎಂದು ಹೇಳುವಂತಿಲ್ಲ. ಇದಕ್ಕೆ ಒಂದೆರಡು ಅಪವಾದಗಳಿರುವುದೇನೋ ನಿಜ. ಮೊದಮೊದಲ ಪರಿಷ್ಕರಣಗಳಲ್ಲಿ, ಒದಗಿಸಿಕೊಂಡ ಹಸ್ತಪ್ರತಿಗಳಲ್ಲಿ ಯಾವುದನ್ನು ಆಧಾರಪ್ರತಿಯಾಗಿಟ್ಟುಕೊಂಡಿದೆ, ಯಾವುವು ಉಳಿದ ಪ್ರತಿಗಳು, ಅವುಗಳ ಪಾಠಭೇದಗಳು ಯಾವುವು ಇತ್ಯಾದಿ ವಿವರಗಳನ್ನು ತೋರಿಸುವುದಕ್ಕಿಂತ ಒಂದು ಸುಬೋಧವಾದ ಪರಿಷ್ಕರಣವನ್ನು ಬೆಳಕಿಗೆ ತರುವುದಾದರೆ ತಾವು ಕೃತಕೃತ್ಯರಾದಂತೆ ಎಂಬ ಭಾವನೆ ಅವುಗಳ ಸಂಪಾದಕರಿಗೆ ಸಾಮಾನ್ಯವಾಗಿ ಇದ್ದಂತೆ ತೋರುತ್ತದೆ. ಕೊಡುವುದಾದರೆ, ಅಲ್ಲೊಂದು ಇಲ್ಲೊಂದು ಪಾಠಭೇದ, ವಿಶೇಷಾಂಶದ ಸಣ್ಣ ಟಿಪ್ಪಣಿ—ಇಷ್ಟು ಸಾಕು ಎಂದು ಅವರು ತಿಳಿದಿದ್ದ ಹಾಗೆ ತೋರುತ್ತದೆ. ಆರ್. ನರಸಿಂಹಾಚಾರ್ಯರು ತೋರಿಸಿದ ದಾರಿಯಲ್ಲಿ ಈಚೆಗೆ ಎ. ವೆಂಕಟರಾವ್ ಮತ್ತು ಎಚ್. ಶೇಷ ಅಯ್ಯಂಗಾರ್ ಅವರು ಸಾಗಿ ಗ್ರಂಥ ಸಂಪಾದನೆಯನ್ನು ಹೆಚ್ಚು ಜವಾಬ್ದಾರಿಯುತ ಕಾರ್ಯವನ್ನಾಗಿ ಮಾಡಿದರು ; ಗ್ರಂಥೋಪಯುಕ್ತ ಅಭ್ಯಾಸ ಸಾಮಗ್ರಿಯನ್ನು ಹೆಚ್ಚು ಉತ್ಸಾಹದಿಂದ ಒದಗಿಸಲು ತೊಡಗಿದರು. ಇಷ್ಟಾಗಿ ಪಾಠಭೇದಗಳನ್ನು ತೋರಿಸಲು ಅವರು ಅನುಸರಿಸಿದ ಕ್ರಮಗಳು ಅಚ್ಚುಕಟ್ಟಾಗಿರಲಿಲ್ಲವೆನ್ನಬೇಕು. ಇನ್ನೂ ಈಚೆಗೆ ಎಚ್. ಆರ್. ರಂಗಸ್ವಾಮಿ ಅಯ್ಯಂಗಾರ್, ಎಚ್. ದೇವೀರಪ್ಪ, ಎಂ.ವಿ. ಸೀತಾರಾಮಯ್ಯ—ಈ ಕೆಲವರು ಈ ಬಗೆಗೆ ಓದುಗರಿಗೆ ಅನುಕೂಲವಾಗುವ ಸುಕರವಾದ ವಿಧಾನಗಳನ್ನು ಅನುಸರಿಸಿದರೆಂದು ಹೇಳಬಹುದು ; ಅಡಿಟಿಪ್ಪಣಿಗಳಲ್ಲಿ ಸೂಕ್ತ ಸಂಕೇತಗಳೊಂದಿಗೆ ಪಾಠಾಂತರಗಳನ್ನು ಸೂಚಿಸಿದ್ದು ಇವುಗಳಲ್ಲಿ ಒಂದಾಗಿದೆ.

ದೊರೆತ ಪ್ರತಿಗಳಲ್ಲಿ ತೃಪ್ತಿಕರವಾಗಿ ತೋರಿದ ಒಂದನ್ನು ಆಧಾರಪ್ರತಿಯನ್ನಾಗಿಟ್ಟುಕೊಂಡು, ಇತರ ಪ್ರತಿಗಳ ಪಾಠಾಂತರಗಳನ್ನು ಅಡಿಟಿಪ್ಪಣಿಗಳಲ್ಲಿಯೋ

ಗ್ರಂಥಾಂತ್ಯ ಪರಿಶಿಷ್ಟದಲ್ಲಿಯೋ ತೋರಿಸುವ ಕ್ರಮವನ್ನು ಈ ಶಾಖೆಯ ಲಕ್ಷಣ ಗ್ರಂಥಗಳ ವಿಚಾರದಲ್ಲಿಯೂ ಬಹುಮಟ್ಟಿಗೆ ಅನುಸರಿಸಿರುವುದು ಕಾಣುತ್ತದೆ. ಲಭ್ಯ ವಾದ ಹಸ್ತಪ್ರತಿಗಳ ನಡುವೆ ಹೆಚ್ಚಿನ ವ್ಯತ್ಯಾಸಗಳಿಲ್ಲವಾದರೆ, ನ್ಯೂನಾಧಿಕ್ಯ ಪಾಠ ಗಳು ಬಹುವಾಗಿ ಇಲ್ಲದಿದ್ದರೆ, ಆಧಾರಪ್ರತಿಯನ್ನಿಟ್ಟುಕೊಳ್ಳುವುದರಿಂದ ತೊಂದರೆ ಯೇನಿಲ್ಲ. ಆದರೆ ಬಿ. ಎಂ. ಶ್ರೀ. ಅವರು ತಿಳಿಸಿರುವಂತೆ (ಪುಟ ೩೦ ನೋಡಿ), ಉಪಯುಕ್ತವಾದ ಪಾಠಭೇದಗಳನ್ನಷ್ಟೇ ತೋರಿಸಿದರೆ, ಸಮರ್ಥನಾದ ಓದುಗನಿಗೆ ಸೂಕ್ತ ತೋರಿದಂತೆ ಅವುಗಳ ಸಹಾಯವನ್ನು ಪಡೆಯಲು ಅನುಕೂಲವಾಗುವುದು. ನಮ್ಮ ಗ್ರಂಥಸಂಪಾದಕರು ಈ ಸೂಚನೆಯನ್ನು ಅವಶ್ಯವಾಗಿ ಗಮನಿಸಬೇಕು.

(೨) ಈ ಲಕ್ಷಣಗ್ರಂಥಗಳ ಸಂಪಾದನೆಯಲ್ಲಿಯೂ ಸಂಪಾದಕನ ವ್ಯುತ್ಪತ್ತಿಯ ಪಾತ್ರ ದೊಡ್ಡದೆಂದೇ ತಿಳಿದಿದೆ. ತತ್ಕಾಲೀನ ಭಾಷಾವಿಜ್ಞಾನದ ಹಾಗೂ ಕಾಲ ಕಾಲದ ಲಿಪಿಸ್ವರೂಪಜ್ಞಾನದ ಜೊತೆಗೆ, ಕನ್ನಡ ಗ್ರಂಥಗಳಿಗೆ ಆಕರಸ್ಥಾನದಲ್ಲಿರುವ ದಂಡಿ ಮೊದಲಾದವರ ಸಂಸ್ಕೃತ ಭಾಷೆಯ ಹಲವು ಅಲಂಕಾರಗ್ರಂಥಗಳ ಪರಿಚಯ ವನ್ನು ಪಡೆಯಬೇಕಾದ್ದು ಅತ್ಯವಶ್ಯವಾದ್ದಾಗಿದೆ. ಮುಖ್ಯವಾಗಿ 'ಕವಿರಾಜಮಾರ್ಗ', 'ಕಾವ್ಯಾವಲೋಕನ', 'ರಸರತ್ನಾಕರ', 'ಮಾಧವಾಲಂಕಾರ' ಈ ಕೆಲವು ಗ್ರಂಥಗಳ ಸಂಪಾದನೆಯಲ್ಲಿ ಒಂದಕ್ಕಿಂತ ಹೆಚ್ಚಿನ ಗ್ರಂಥಗಳ ಅವಲಂಬನೆಯನ್ನು ಪಡೆಯ ಬೇಕಾಗಿದೆ. ಇದರೊಂದಿಗೆ ಕನ್ನಡದ ಪ್ರಾಚೀನ ಕಾವ್ಯಪುರಾಣಾದಿ ಗ್ರಂಥಗಳ ಅಭ್ಯಾಸವೂ ಅಪೇಕ್ಷಣೀಯವಾಗಿದೆ. ಇದರಿಂದ 'ಕಾವ್ಯಾವಲೋಕನ', 'ರಸ ರತ್ನಾಕರ' ಇಂತಹ ಗ್ರಂಥಗಳಲ್ಲಿ ಉದ್ಧೃತವಾದ ಲಕ್ಷ್ಯಪದ್ಯಗಳ ಪಾಠಪರಿಷ್ಕಾರ ಸುಲಭವಾಗಿ ಆಗುತ್ತದೆ; ಹಸ್ತಪ್ರತಿಗಳ ಪಾಠ ಹೆಚ್ಚು ಅಶುದ್ಧವಾಗಿರುವೆಡೆ, ಈ ಆಕರಗ್ರಂಥಗಳ ಪಾಠಗಳನ್ನು ಪರಿಷ್ಕರಣಕಾರ್ಯದಲ್ಲಿಯೂ ಕೆಲವೆಡೆ ಪಾಠ ಭೇದಗಳನ್ನು ಪ್ರತ್ಯೇಕವಾಗಿಯೇ ಸೂಚಿಸುವುದಕ್ಕಾಗಿಯೂ ಬಳಸಿಕೊಳ್ಳಬಹು ದೆಂದು ತೋರುತ್ತದೆ.

(೩) ಕನ್ನಡ ಛಂದೋಗ್ರಂಥಗಳ ಸಂಪಾದನೆಯಲ್ಲಿ ಈಗಾಗಲೇ ಗಮನಿಸಿ ಸೂಚಿಸಿರುವಂತೆ ಈ ಶಾಖೆಯ ಕೆಲವು ಲಕ್ಷಣಗ್ರಂಥಗಳ ವಿಷಯದಲ್ಲಿಯೂ ಗ್ರಂಥಶರೀರದಲ್ಲಿಯೇ ಸೂಚನೆ, ಟಿಪ್ಪಣಿ ಇತ್ಯಾದಿಗಳನ್ನು ಕೊಟ್ಟಿರುವುದು ಒಪ್ಪ ತಕ್ಕದ್ದಲ್ಲ. ಇವೂ ಕವಿಪಾಠವೆಂಬ ಭ್ರಾಂತಿಯನ್ನು ಅವು ಉಂಟುಮಾಡುವುದು ಸಾಧ್ಯವಿದೆ; ಕವಿಯೇ ಒಂದು ಪಕ್ಷ ಅಂಥ ಸೂಚನೆಗಳನ್ನು ಮಾಡಿದ್ದರೆ (ಉದಾ ಹರಣೆಗೆ, 'ಕಾವ್ಯಾವಲೋಕನ'ದಲ್ಲಿಯ ಪದ್ಯಾದಿಯ ಸೂಚನೆಗಳು ಪ್ರಾಯಃ ಕವಿಯೇ ಬರೆದಿರಬಹುದಾದುವು ಎಂದು ತೋರುತ್ತದೆ), ಅವನ್ನು ಕೊಡಬೇಕಾಗು ತ್ತದೆ. ಹಾಗಲ್ಲವಾದರೆ, ಅಲಂಕಾರಗಳ ಹೆಸರುಗಳನ್ನು, ಅಥವಾ ಅಂಥ ವಿವರ ಗಳನ್ನು, ಆಯಾ ಗದ್ಯಭಾಗಗಳೊಳಗೇ ಅವು ಬಂದಿದ್ದ ಪಕ್ಷದಲ್ಲಿ, ದಪ್ಪಕ್ಷರಗಳಲ್ಲಿ ಮುದ್ರಿಸಿ ತೋರಿಸಬಹುದು; ಪದ್ಯಸಂಖ್ಯೆಯನ್ನು ಅನುಕ್ರಮವಾಗಿ ಕೊಡಬಹುದು.

ಅತ್ಯವಶ್ಯವೆಂದು ತೋರಿದರೆ ಇಂಥ ಸೂಚನೆಗಳನ್ನು ಸಂಪಾದಕೀಯ ಚಿಹ್ನೆಗಳೊಳಗೆ ತೋರಿಸಬಹುದು.

(೪) ಕವಿಪಾಠ ಮುಖ್ಯವಾದ್ದು. ಕವಿರಚಿತವೇ ಆಗಿದ್ದರೆ, ವೃತ್ತಿ ಟೀಕೆಗಳೂ ಅದೇ ಮಹತ್ವ ಪಡೆಯುತ್ತವೆ. ಉದಾಹರಣೆಗೆ, ಶಾರದಾವಿಲಾಸದ 'ವಿವರಣ' ಈ ತೆರನಾದ್ದು. ಅನ್ಯಕೃತ ವೃತ್ತಿಟೀಕೆಗಳು ಕನ್ನಡ ಅಲಂಕಾರ ಗ್ರಂಥಗಳಲ್ಲಿ ಯಾವುದೊಂದಕ್ಕಾದರೂ ಇರುವಂತೆ ತೋರುವುದಿಲ್ಲ; ಇದ್ದರೆ, ಅವನ್ನು ಪ್ರತೀಕ ಖಾನೆಯಲ್ಲಿ ಅಡಿಟಿಪ್ಪಣಿ ಭಾಗದಲ್ಲಿ ತೋರಿಸಬಹುದು.

ಮುಖ್ಯಪಾಠಭೇದಗಳನ್ನಷ್ಟು ತೋರಿಸಿ, ಅಕ್ಷರಸ್ಖಾಲಿತ್ಯಗಳನ್ನು ಪಾಠಾಂತರಗಳನ್ನಾಗಿ ತೋರಿಸದೆ ಕೈಬಿಡುವುದು ಸೂಕ್ತ. ಅವಶ್ಯವೆಂದರೆ ತುಂಬ ಸಂಕ್ಷೇಪವಾಗಿ ಪಾಠಸಮಸ್ಯೆಗಳನ್ನು ಚರ್ಚಿಸಬಹುದು; ಸಂಶಯ, ತಿದ್ದುಪಡಿ ತೋರಿಸಬಹುದು; ಪಾಠಗಳ ನ್ಯೂನಾಧಿಕ್ಯಗಳನ್ನೂ ಆನುಪೂರ್ವಿ ವ್ಯತ್ಯಾಸಗಳನ್ನು ಸೂಚಿಸಬಹುದು. ಇದು ಸಂಪಾದಕನ ಪಾಂಡಿತ್ಯ ಪರಿಶ್ರಮಗಳನ್ನು ಅವಲಂಬಿಸಿರುತ್ತದೆ.

ಪಾಠಸಮಸ್ಯೆಗಳೂ ಪಾಠಗಳ ನ್ಯೂನಾಧಿಕ್ಯಗಳೂ ಆನುಪೂರ್ವಿಯ ವ್ಯತ್ಯಾಸಗಳೂ ಬಹಳವಾಗಿದ್ದಲ್ಲಿ, ಪರಿಶಿಷ್ಟದಲ್ಲಿ ಅವನ್ನು ಸೂಚಿಸಬಹುದು; ವಿಮರ್ಶಿಸಬಹುದು. ಉದಾಹರಣೆಗೆ, ಕವಿರಾಜಮಾರ್ಗದಲ್ಲಿ ಪ್ರಾಸವಿಚಾರದ ಅಧಿಕ ಪಾಠವನ್ನು ಹೀಗೆ ಮಾಡಲು ಸಾಧ್ಯವಾಗಿರುವುದು ತಿಳಿದಿದೆ. ಆದರೆ ಪಾಠಸಮಸ್ಯೆಗಳನ್ನೆಲ್ಲ, ಸಾಮಾನ್ಯ ಲಿಪಿಕಾರಸ್ಖಾಲಿತ್ಯಗಳನ್ನೆಲ್ಲ, ಅಲ್ಲಿ, ಉದಾಹರಣೆಗೆ 'ಕವಿರಾಜಮಾರ್ಗ', 'ರಸರತ್ನಾಕರ' ಇವುಗಳ ಮದ್ರಾಸು ಪರಿಷ್ಕರಣಗಳಲ್ಲಿ ಆಗಿರುವಂತೆ, ತೋರಿಸುವುದು ಅನಾವಶ್ಯಕವೆಂದು ಹೇಳಬೇಕು.

(೫) ಈ ಹಿಂದೆ ಗಮನಿಸಿರುವಂತೆ ಗ್ರಂಥಪಾಠದ ಶುದ್ಧಿಗಾಗಿ, ಗ್ರಂಥರಚನೆಯಾದ ಕಾಲದ ಭಾಷೆ, ಕರ್ತೃವಿನ ಶೈಲಿಯ ವೈಲಕ್ಷಣ್ಯಗಳು ಮುಂತಾದುವನ್ನು ಸಂಪಾದಕನು ಬಲ್ಲವನಾಗಿರಬೇಕು. ಲಿಪಿಕಾರ ಸ್ಖಾಲಿತ್ಯಗಳನ್ನೂ ಱ—ೞಗಳ ಸಂಯೋಜನೆಯಲ್ಲಿಯ ತಪ್ಪುಗಳನ್ನೂ ಸರಿಪಡಿಸಬೇಕು. ಪದಚ್ಛೇದಗಳು ಸರಿಯಾಗಿರುವಂತೆ ನೋಡಿಕೊಳ್ಳಬೇಕು. ಕೆಲವು ಗ್ರಂಥಗಳಲ್ಲಿ ಆಗಿರುವಂತೆ ಗದ್ಯಪದ್ಯಗಳನ್ನು ಅನುಸ್ಯೂತವಾಗಿ ಮುದ್ರಿಸುವುದು ಸರಿಯಲ್ಲ. ಸಾಧ್ಯವಾದರೆ ಶಿಥಿಲದ್ವಿತ್ವ ಸೂಚಕವಾಗಿ ನಕ್ಷತ್ರಚಿಹ್ನೆಗಳನ್ನು ಯೋಜಿಸುವುದರಿಂದ, ಶಿಥಿಲದ್ವಿತ್ವದ ನಿಯಮಗಳ ಪರಿಚಯವಿಲ್ಲದವರಿಗೆ ಅನುಕೂಲವಾಗುವುದು. ರ್ಗ೦ಶರ 'ಕಾವ್ಯಾವಲೋಕನ' ಮುಂತಾದೆಡೆ ತೋರಿಸಿರುವಂತೆ, ರೇಫದೊಂದಿಗೆ ಕೂಡುವ ಇನ್ನೊಂದು ವ್ಯಂಜನವನ್ನು ದ್ವಿತ್ವಮಾಡಿ ತೋರಿಸುವುದು ಅನಾವಶ್ಯಕ.

(೬) ಉಪೋದ್ಘಾತದಲ್ಲಿ ಕವಿವಿಚಾರ, ವಸ್ತುವಿಶ್ಲೇಷಣೆ, ಗ್ರಂಥಪ್ರಯೋಜನ ಮತ್ತು ಪಾಠಸಾಮಗ್ರಿಯ ಸೂಚನೆ ಇಷ್ಟು ಮಾತ್ರ ಇರುವುದು

ಒಳ್ಳೆಯದು. ಹಾಗೆಯೇ ಪರಿಶಿಷ್ಟದಲ್ಲಿ ಆಕರಗ್ರಂಥಗಳೊಂದಿಗೆ ಸಾದೃಶ್ಯಗಳು, ಲಕ್ಷ್ಯಪದ್ಯಗಳ ಆಕರಗಳು, ಪರಿಭಾಷೆಯ ಶಬ್ದಗಳ ಮತ್ತು ಅಲಂಕಾರಾದಿಗಳ ಅಕಾರಾದಿ-ಇಂತಹ ಕೆಲವು ಉಪಯುಕ್ತ ವಿಷಯಗಳು ಸೇರಿರಬಹುದು. ಈ ಸಂಬಂಧದಲ್ಲಿ ಆರ್. ನರಸಿಂಹಾಚಾರ್ಯರ ಉಪೋದ್ಘಾತಗಳೂ ಅನುಬಂಧಗಳೂ ಒಳ್ಳೆಯ ಮಾದರಿಗಳೆನ್ನಬಹುದು. ಟಿಪ್ಪಣಿಗಳೂ ಸಹಾಯಕವಾದವೇ. ಕಾವ್ಯಾವಲೋಕನದ ಧಾರವಾಡದ ಪರಿಷ್ಕರಣ, 'ಕವಿರಾಜಮಾರ್ಗ'ದ ಎಂ.ವಿ. ಸೀತಾರಾಮಯ್ಯನವರ ಪರಿಷ್ಕರಣ—ಇವುಗಳು ಈ ದೃಷ್ಟಿಯಿಂದ ಮಾದರಿಯಾಗಬಲ್ಲುವು.

# ಗಂಗ ೩ನೆಯ (ತಡಂಗಾಲ) ಮಾಧವನ ಚಲುವನಹಳ್ಳಿ ತಾಮ್ರಪಟಗಳು*

ಎಚ್. ಎಸ್. ಗೋಪಾಲರಾಯ

ಪ್ರಸ್ತುತ ನನ್ನ ಅಧ್ಯಯನಕ್ಕೆ ಪಡೆದಿರುವ ೩ನೆಯ ಮಾಧವನ ತಾಮ್ರಶಾಸನ ದಲ್ಲಿ ನಾಲ್ಕು ಹಲಗೆಗಳಿದ್ದು, ಮೊದಲ ಹಲಗೆಯ ಮೇಲ್ಭಾಗ ಮತ್ತು ಕೊನೆಯ ಅಂದರೆ ನಾಲ್ಕನೆಯ ಹಲಗೆಯ ಕೆಳಭಾಗದಲ್ಲಿ ಶಾಸನವನ್ನು ಕೊರೆದಿಲ್ಲ. ನಾಲ್ಕು

---

* ೧೯೭೮ರ ಸೆಪ್ಟಂಬರ್ ಕೊನೆಯ ವಾರದಲ್ಲಿ ಕೋಲಾರದ ನನ್ನ ಗೆಳೆಯ ಶ್ರೀ ಕೆ. ಎಸ್. ರಾಮಮೂರ್ತಿ ಅವರು ನನಗೆ ಎರಡು ತಾಮ್ರ ಶಾಸನಗಳನ್ನು ತಂದುಕೊಟ್ಟರು. ಅವರಿಗೆ ಆ ಎರಡು ತಾಮ್ರಶಾಸನಗಳೂ ಕೋಲಾರ ತಾಲ್ಲೂಕಿನ ಚಲುವನಹಳ್ಳಿಯ ಶ್ಯಾನುಭೋಗ್ ಶ್ರೀ ಕೆ.ಆರ್. ವೆಂಕಟೇಶಯ್ಯ ಅವರ ಬಳಿ ಇದ್ದವು. ಈ ಎರಡೂ ಗಂಗರ ಕಾಲಕ್ಕೆ ಸೇರಿದ್ದು—ಅವುಗಳ ಪೈಕಿ ಸಿಂಹವರ್ಮನ ಶಾಸನವನ್ನು ಕನ್ನಡ ಸಾಹಿತ್ಯ ಪರಿಷತ್ತಿನ, ಸಂಶೋಧನಾ ವಿಭಾಗದಲ್ಲಿದ್ದ ಶ್ರೀ ದೇವರ ಕೊಂಡಾರೆಡ್ಡಿಯವರೂ ಮಾಧವ (೩)ನ ಶಾಸನವನ್ನು ನಾನೂ ಅಧ್ಯಯನಕ್ಕೆ ಹಂಚಿಕೊಂಡೆವು.

ಈ ಎರಡೂ ತಾಮ್ರಶಾಸನಗಳಲ್ಲೂ ಗಂಗರ ಲಾಂಛನವಾದ ಆನೆಯ ಮುದ್ರೆಯಿದ್ದು, ಬ್ರಹ್ಮಾದೇಯದ ಉಲ್ಲೇಖಗಳಾಗಿವೆ.

ಈ ಎರಡೂ ತಾಮ್ರಶಾಸನಗಳು ಕನ್ನಡ ಸಾಹಿತ್ಯ ಪರಿಷತ್ತಿನ ಸಂಶೋಧನಾ ವಿಭಾಗ ದಲ್ಲಿ ಶಾಸನಶಾಸ್ತ್ರ ತರಗತಿಯ ವಿದ್ಯಾರ್ಥಿಗಳ ಅಭ್ಯಾಸಕ್ಕೆಂದು ಇಡಲ್ಪಟ್ಟವೆ.

(ಶ್ರೀ ದೇವರ ಕೊಂಡಾರೆಡ್ಡಿಯವರ 'ಕುತ್ತೂರ ಸಿಂಹವರ್ಮನ ತಾಮ್ರಶಾಸನ' ಎಂಬ ಲೇಖನ ಈ ಪತ್ರಿಕೆಯ ಸಂಪುಟ ೬೬–೬೭, ಸಂಚಿಕೆ ೩–೧, ಪುಟ ೧೫–೩೬ರಲ್ಲಿ ಪ್ರಕಟಗೊಂಡಿದೆ.—ಸಂ.)

ಹಲಗೆಗಳನ್ನೂ ಎಡಭಾಗದಲ್ಲಿ ಕೊರೆದಿರುವ ರಂಧ್ರದ ಮೂಲಕ ಉಂಗುರಕ್ಕೆ ಸೇರಿಸಿ, ಉಂಗುರದ ಎರಡು ತುದಿಗಳೂ ಸೇರುವೆಡೆ ಗಂಗರ ಲಾಂಛನವಾದ ಆನೆಯ ಮುದ್ರೆಯನ್ನು ಬೆಸೆಯಲಾಗಿದೆ. ಈ ಶಾಸನದಲ್ಲಿಯ ಗಂಗರ ಲಾಂಛನವಾದ ಆನೆಯಲ್ಲಿ ಗಮನಿಸಬೇಕಾದ ಅಂಶವೆಂದರೆ, ಸಾಮಾನ್ಯವಾಗಿ ಬೇರೆ ಶಾಸನಗಳಲ್ಲಿ ಕಾಣುವಂತೆ, ಆನೆಯ ಮುಖವು ಬಲಗಡೆಗೆ ಇರದೆ ಎಡಕ್ಕಿದೆ. ಪ್ರತಿಯೊಂದು ಹಲಗೆಯೂ ಆಯತಾಕಾರವಾಗಿದ್ದು, ೨೦.೫ ಸೆಂ. ಮೀ. ಉದ್ದ ಮತ್ತು ೫.೪ ಸೆಂ. ಮೀ. ಅಗಲ ಇವೆ. ಉಂಗುರ ಮತ್ತು ಮುದ್ರೆಯ ಸಹಿತ ಶಾಸನದ ಒಟ್ಟು ತೂಕ ೪೭೦ ಗ್ರಾಂಗಳು. ಪ್ರತಿ ಹಲಗೆಯಲ್ಲೂ ನಾಲ್ಕು ಸಾಲು ಶಾಸನವನ್ನು ಕೊರೆಯಲಾಗಿದೆ.

೩ನೆಯ ಮಾಧವನ ಶಾಸನದ ಪಾಠ ಹೀಗಿದೆ:

## ಶಾಸನದ ಪಾಠ

ಮೊದಲನೆಯ ಹಲಗೆ ಹಿಂಭಾಗ

೧ ಜಿತಮ್ಭಗವತಾಗತ ಘನ ಗಗನಾಭೇನ ಪದ್ಮನಾಭೇನ ಶ್ರೀಮಜ್ಜಾಹ್ನವೇಯ ಕು

೨ ಲಾ ಮಲವ್ಯೋಮವ ಭಾಸನ ಭಾಸ್ಕರಸ್ಯ ಕಾಣ್ವಾಯನಸ ಗೋತ್ರಸ್ಯ ಶ್ರೀಮತ್ಕೊಙ್ಗಣಿ

ಸ್ವಸ್ತಿ

೩ ವರ್ಮ್ಮ ಧರ್ಮ್ಮ ಮಹಾಧಿರಾಜಸ್ಯ ಪುತ್ರಸ್ಯ ಪಿತುರನ್ವಾಗತ ಗುಣಯುಕ್ತ

೪ ಸ್ಯ ನಾನಾ ಶಾಸ್ತ್ರಾರ್ತ್ಥ ಸದ್ಭಾವಾಧಿಗಮ ಪ್ರಣೀತಮತಿ ವಿಶೇಷಸ್ಯ ಸಮ್ಯ

ಎರಡನೆಯ ಹಲಗೆ ಮುಂಭಾಗ

೫ ಕ್ಪ್ರಜಾಪಾಲನ ಮಾತ್ರಾಧಿಗತ ರಾಜ್ಯ ಪ್ರಯೋಜಸ್ಯ ಶ್ರೀಮನ್ಮಾಧವ ವರ್ಮ್ಮಧಿ

೬ ಜಸ್ಯ ಸುತೈರನೇಕ ಯುದ್ಧ ಲಬ್ಧ ಯಶಃ ಪ್ರಕಾಶಸ್ಯ ವಸುಧಾತಲೈಕ ವೀರಸ್ಯ ಶ್ರೀ

೭ ಮುದ್ಧರಿವರ್ಮ್ಮ ಮಹಾಧಿರಾಜಸ್ಯ ಪುತ್ರಸ್ಯ ಪಿತೃ ಪೈತಾ ಮಹಾಗುಣಗಣ

೮ ಲಂಕೃತಸ್ಯ ಅಭ್ಯುಚ್ಛಿತ ಶಕ್ತಿ ಸಿದ್ಧಿ ಸಮ್ಪನ್ನಸ್ಯ ಶ್ರೀಮತೋ ವಿಷ್ಣು ಗೋಪ ಪ

ಎರಡನೆಯ ಹಲಗೆ ಹಿಂಭಾಗ

೯ ಹಾಧಿ ರಾಜಸ್ಯ ಪುತ್ರೇಣ ದೇವ ದ್ವಿಜ ಗುರು ವೃದ್ಧಾಪವಾಯಿನಾ
ಸ್ವಭುಜಬಲ ಪರಾಕ್ರಮಕ್ರಿ

೧೦ ಯ ಕ್ರಿತಾರಾಜ್ಯೇನ ಅಮೃತ ವಿಷ ಸಮ ಪ್ರಸಾದಕೋಪೇನ
ಭಗವದ್ಧರ ಚರ

೧೧ ಣಾರ ವಿತ್ಥಾರಾಧನ ಸಮ್ಪಾದಿತ ಸರ್ವ್ವ ಸಮ್ಪದಾ ಕಲಿಯುಗ
ದೋಷಾವಸನ್ನ ಸ

೧೨ ದ್ಧರ್ಮ್ಮೋದ್ಧರಣ ಕೃತ ಪರಿಕರೇಣ ಪ್ರತಾಪೋಪನತ ರಾಜಮಣ್ಡಲಿನ
ಶಕ್ತಿತ್ರಯ

ಮೂರನೆಯ ಹಲಗೆ ಮುಂಭಾಗ

೧೩ ಸಮ್ಪತ್ರವೃದ್ಧ ರಾಜಶ್ರಿಯಾ ಅನೇಕ ಯಜ್ಞ ದಕ್ಷಿಣೋದಾನೈಕ ವ್ರತ
ತತ್ಪರೇಣ ವೀರ ವಿಚ್ಛಿನ್ನ

೧೪ ಬ್ರಹ್ಮದೇಯ ಪ್ರದಾನ ಪ್ರಥಿತ ಕೀರ್ತ್ತಿನಾ ಶ್ರೀಮನ್ಮಾಧವ ವರ್ಮ್ಮ
ಮಹಾಧಿರಾಜೇನ ಆತ್ಮನಃ ಪ್ರವರ್ದ್ಧ

೧೫ ಮಾನ ವಿಪುಲ ವಿಜಯೈಶ್ವರ್ಯ್ಯೇ ಪ್ರಥಮೇ ಸಂವತ್ಸರೇ ಫಾಲ್ಗುನೇ
ಮಾಸೇ ತಿಥೌ ಪೌರ್ಣ್ಣಮಾಸ್ಯಾಂ

೧೬ ಉತ್ತರೇ ನಕ್ಷತ್ರೇ ಸ್ವವಿಜಯಾಯುಷ್ಯೈಶ್ವರ್ಯ್ಯಾಭಿವೃದ್ಧಯೇ
ವತ್ಸಗೋತ್ರಾಯ ವಾಜಸನೇಯಿನೇ ದಿವಾ

ಮೂರನೆಯ ಹಲಗೆ ಹಿಂಭಾಗ

೧೭ ಕರಸ್ವಾಮಿನೇ ಕುವಲಾಲರಾಷ್ಟ್ರೇ ಕುವಲಾಲ ತಟಾಕಸ್ಯಾ ದಸ್ತಾ
ಕುರಟ್ಟೂರ ಕೇದಾರಶ್ಚ ಚೆಪ್ಪ ಕೇದಾರಶ್ಚ ಚಕ್ರ ಕೇದಾರಶ್ಚ

೧೮ ಏತಾನಿ ತ್ರಯಾಣಿ ಕೇದಾರಾಣಿ ಬ್ರಹ್ಮದೇಯ ಕ್ರಮೇಣ ಸರ್ವ್ವ
ಪರಿಹಾರ ಯುಕ್ತಃ ಸಮ್ಪ್ರದತ್ತಃ ಯೋ

೧೯ ಸ್ಯ ಲೋಭಾತ್ಪ್ರಮಾದಾದ್ವಾಪಿ ಹರ್ತ್ತಾ ಸಪಞ್ಚ ಮಹಾಪಾತಕ
ಸಂಯುಕ್ತೋ ಭವತಿ ಅಪಿಚ ಮನುಗೀ

೨೦ ತಾ ಶ್ಲೋಕಾ ಭವನ್ತಿ ‖ ಸ್ವದತ್ತಾಮ್ಪರದತ್ತಾಂ ವಾಯೋಹರೇತ
ವಸುನ್ಧರಾಂಗವಾಂ ಶತ ಸಹಸ್ರಸ್ಯ

ನಾಲ್ಕನೆಯ ಹಲಗೆ ಮುಂಭಾಗ

೨೧ ಹನ್ತುಃ ಬಿಷತಿ ದುಷ್ಕೃತಮ್ || ಭೂಮಿದಾನಾತ್ಪರನ್ದಾನ ನ್ನ ಭೂತನ್ನ ಭವಿಷ್ಯತಿ

೨೨ ತಸ್ಯೈ ೖವ ಹರಣಾತ್ಪಾಪ ನ್ನ ಭೂತನ್ನ ಭವಿಷ್ಯತಿ || ಬ್ರಹ್ಮಸ್ವನ್ತು ವಿಷಂ ಘೋರಂ

೨೩ ವಿಷಂ ವಿಷಮುಚ್ಯತೇ ವಿಷಮೇಕಾಕಿನಂ ಹನ್ತಿ ಬ್ರಹ್ಮಸ್ವಂಪುತ್ರ ಪೌತ್ರಿಕಂ||

೨೪ ಸ್ವಸ್ತ್ಯೈಸ್ತು ಗೋಬ್ರಾಹ್ಮಣೇ ಭ್ಯಃ || ಶಾನ್ತಿರಸ್ತು ||

೧

೨ (ಅ)

## ಶಾಸನದ ಅನುವಾದ

ಸ್ವಸ್ತಿ, (ಜಿತ) ಜಯವಾಗಲಿ.

ಪೂಜ್ಯನಾದ, ಮೋಡವಿಲ್ಲದ ಆಕಾಶದಂತೆ ಹೊಳೆಯುವಂತಹ ಪದ್ಮನಾಭನಾದ ಜಾಹ್ನವೀಯ (ಗಂಗ) ವಂಶವೆಂಬ ಪರಿಶುದ್ಧವಾದ ಗಗನದಲ್ಲಿ ಹೊಳೆಯುವ ಭಾಸ್ಕರನಾದ, ಕಾಣ್ವಾಯನಸ ಗೋತ್ರದ ಶ್ರೀಮತ್ಕೊಂಙ್ಗಣಿವರ್ಮ್ಮ ಮಹಾಧಿರಾಜನ ಮಗನಾದ, ತಂದೆಯಂತೆಯೇ ಸದ್ಗುಣ ಸಮೇತನಾದ, ನಾನಾ ಶಾಸ್ತ್ರಾರ್ಥಗಳ ಸದ್ಭಾವವನ್ನು ತಿಳಿದಂತಹ ವಿಶೇಷ ಬುದ್ಧಿಯುಳ್ಳ, ಸರಿಯಾದ ರೀತಿಯಲ್ಲಿ ಪ್ರಜೆಗಳ ರಕ್ಷಣೆಯನ್ನು ಮಾಡುವ ಸಲುವಾಗಿ ರಾಜ್ಯವನ್ನು ಪಡೆದಂತಹ ಯಶಃಪ್ರಕಾಶವುಳ್ಳ ವಸುಧಾತಲೈಕ ವೀರನಾದ ಶ್ರೀಮತ್ ಹರಿವರ್ಮ ಮಹಾಧಿರಾಜನ ಮಗನಾದ, ಪಿತೃ ಪಿತಾಮಹರ ಗುಣಗಣಾಲಂಕೃತನಾದ, ಅತ್ಯಂತ ಉತ್ತಮವಾದ ಶಕ್ತಿ ಮತ್ತು ಸಿದ್ಧಿ ಸಂಪನ್ನನಾದ ಶ್ರೀಮನ್ ವಿಷ್ಣುಗೋಪ ಮಹಾಧಿರಾಜನ ಮಗನಾದ, ದೇವದ್ವಿಜಗುರುವೃದ್ಧರಿಗೆ ಅಪವಾಯಿಯಾದ, ತನ್ನ ಭುಜಬಲ ಪರಾಕ್ರಮವೆಂಬ ಕ್ರಯದಿಂದ ರಾಜ್ಯವನ್ನು ಕೊಂಡುಕೊಂಡಂತಹ, ಅಮೃತಕ್ಕೆ ಸಮಾನವಾದ ಪ್ರಸನ್ನತೆ ಮತ್ತು ವಿಷಕ್ಕೆ ಸಮಾನವಾದ ಕೋಪದಿಂದೊಡಗೂಡಿದ, ಭಗವದ್ಧರ (?) ಚರಣಾರವಿನ್ದದ (?) ಆರಾಧನೆಯಿಂದ ಸಂಪಾದಿಸಿದ ಸರ್ವಸಂಪತ್ತುಳ್ಳ, ಕಲಿಯುಗದ ದೋಷದಿಂದ ನಾಶವಾದಂತಹ ಸದ್ಧರ್ಮವನ್ನು ಉದ್ಧರಿಸಲು ಪರಿಕರಗಳನ್ನು ಸಿದ್ಧಪಡಿಸಿಕೊಂಡಂತಹ, ತನ್ನ ಪ್ರತಾಪದಿಂದ ರಾಜಮಣ್ಡಲವನ್ನು ತಲೆಬಾಗುವಂತೆ ಮಾಡಿದ, ಮೂರುಶಕ್ತಿಗಳ ಸಂಪತ್ತಿನಿಂದ ಪ್ರವೃದ್ಧವಾದ ರಾಜ್ಯಲಕ್ಷ್ಮಿಯುಳ್ಳ, ಅನೇಕ ಯಜ್ಞಗಳಲ್ಲಿ ದಕ್ಷಿಣೆ ಮತ್ತು ದಾನಗಳನ್ನು ಕೊಡುವ ಏಕೈಕ ವ್ರತತತ್ಪರನಾದ, ಬಹಳ ಕಾಲದಿಂದಲೂ ವಿಚ್ಛಿನ್ನವಾಗದ ಬ್ರಹ್ಮದೇಯ ದಾನದಿಂದ ಪ್ರಸಿದ್ಧವಾದ ಕೀರ್ತಿಯುಳ್ಳ ಶ್ರೀಮನ್ಮಾಧವವರ್ಮ್ಮ ಮಹಾಧಿರಾಜನಿಂದ ತನ್ನ ಪ್ರವರ್ಧಮಾನವಾಗುತ್ತಿರುವ ವಿಪುಲ ವಿಜಯ ಐಶ್ವರ್ಯಗಳುಳ್ಳ ಮೊದಲನೆಯ ಸಂವತ್ಸರದ ಫಾಲ್ಗುಣ ಮಾಸದಲ್ಲಿ ಪೌರ್ಣ್ಣಮಾಸ್ಯಾ ತಿಥಿಯಂದು ಉತ್ತರೇ ನಕ್ಷತ್ರದಲ್ಲಿ ತನ್ನ ವಿಜಯ, ಆಯುಷ್ಯ ಮತ್ತು ಐಶ್ವರ್ಯಗಳ ಅಭಿವೃದ್ಧಿಗೋಸ್ಕರವಾಗಿ ವತ್ಸಗೋತ್ರೋತ್ಪನ್ನನಾದ ವಾಜಸನೇಯಿ ಶಾಖಾಧ್ಯಾಯಿಯಾದ ದಿವಾಕರಸ್ವಾಮಿ ಎಂಬುವನಿಗೆ ಕುವಲಾಲ ರಾಷ್ಟ್ರದಲ್ಲಿ, ಕುವಲಾಲ ಕೆರೆಯ ಕೆಳಭಾಗದಲ್ಲಿರುವ [1]ಕುರಟ್ಪೂರ ಕೇದಾರ, [2]ಚಿಮ್ಪು ಕೇದಾರ, [3]ಚಕ್ರಕೇದಾರ ಎಂಬ ಮೂರು ಕೇದಾರ(ಗದ್ದೆ)ಗಳು ಬ್ರಹ್ಮದೇಯದ ವಿಧಿಗನುಸಾರವಾಗಿ ಸಕಲ ಪರಿಹಾರ ಸಮೇತವಾಗಿ ಕೊಡಲ್ಪಟ್ಟಿತು.

ಯಾವನು ಲೋಭದಿಂದಾಗಲೀ ಅಜ್ಞಾನದಿಂದಾಗಲೀ ಇದನ್ನು ಅಪಹರಿಸುತ್ತಾನೆಯೋ ಅವನು ಪಂಚಮಹಾಪಾತಕಗಳಿಂದ ಒಡಗೂಡಿದವನಾಗುತ್ತಾನೆ. ಇದಕ್ಕೆ

ಆಧಾರವಾಗಿ ಮನುವಿನಿಂದ ಹೇಳಲ್ಪಟ್ಟ ಶ್ಲೋಕಗಳಿವೆ. ‖ ತನ್ನಿಂದ ಕೊಡಲ್ಪಟ್ಟ ಅಥವಾ ಇತರರಿಂದ ಕೊಡಲ್ಪಟ್ಟ ಭೂಮಿಯನ್ನು ಯಾವನು ಅಪಹರಿಸುತ್ತಾನೆಯೋ ಅವನು ಸಾವಿರ ಹಸುಗಳನ್ನು ಕೊಂದವನ ದುಷ್ಕೃತವನ್ನು ಹೊಂದುತ್ತಾನೆ ‖ ಭೂಮಿಯ ದಾನಕ್ಕಿಂತ ಶ್ರೇಷ್ಠವಾದ ದಾನವು ಹಿಂದೆ ಇರಲಿಲ್ಲ. ಮುಂದೆಯೂ ಇರುವುದಿಲ್ಲ. ಅದರ (ಅಪಹರಣದಿಂದ) ಪಾಪವು ಹಿಂದೆ ಇರಲಿಲ್ಲ. ಮುಂದೆ ಉಂಟಾಗಬಾರದು. ಬ್ರಾಹ್ಮಣನ ಸಂಪತ್ತು ಘೋರವಿಷವೆಂದು ಹಾಗೂ ವಿಷ ವೆಂದು ಹೇಳಲ್ಪಡುತ್ತದೆ. (ವಿಷವು ವಿಷವೆಂದು ಹೇಳಲ್ಪಡುತ್ತದೆ. ಆದರೆ ಬ್ರಾಹ್ಮಣನ ಸಂಪತ್ತು ಘೋರವಿಷವು. ಏಕೆಂದರೆ ವಿಷವು ಒಬ್ಬನನ್ನು ಕೊಲ್ಲುತ್ತದೆ. ಆದರೆ ಬ್ರಾಹ್ಮಣನ ಸಂಪತ್ತು ಮಕ್ಕಳನ್ನು, ಮೊಮ್ಮಕ್ಕಳ ಸಮೂಹವನ್ನು ಕೊಲ್ಲುತ್ತದೆ.)

ಗೋಬ್ರಾಹ್ಮಣರಿಗೆ ಒಳ್ಳೆಯದಾಗಲಿ ಶಾಂತಿಯಾಗಲಿ—

ಪ್ರಸ್ತುತ ಅಧ್ಯಯನ ಮಾಡುತ್ತಿರುವ ತಾಮ್ರಶಾಸನವು ದಾನದ ಉಲ್ಲೇಖ ವಾಗಿದೆ. ಗಂಗವಂಶದ ವಿಷ್ಣುಗೋಪನ ಮಗನಾದ ಮಾಧ್ವವರ್ಮ್ಮ ಮಹಾಧಿ ರಾಜನು ತನ್ನ ಆಳ್ವಿಕೆಯ ಪ್ರಥಮ ವರ್ಷದಲ್ಲಿ ದಿವಾಕರಸ್ವಾಮಿಗೆ ನೀಡಿರುವ ದಾನದ ವಿವರಗಳನ್ನು ಈ ಶಾಸನ ಒಳಗೊಂಡಿದೆ. ಪ್ರಥಮ ಸಂವತ್ಸರ ಎಂದು ಮಾತ್ರ ಕಾಲದ ದಾಖಲೆ ಇರುವುದರಿಂದ ಖಚಿತವಾದ ಕಾಲವನ್ನು ನಿರ್ಧರಿಸಲು ಸಾಧ್ಯವಾಗುವುದಿಲ್ಲ. ಈವರೆಗೆ ಅನೇಕ ಶಾಸನತಜ್ಞರ, ಚರಿತ್ರಕಾರರ ಸಂಶೋಧನೆ ಮತ್ತು ತೀರ್ಮಾನಗಳಿಂದ ಮಾಧವ(೩)ನ ಕಾಲವು ಕ್ರಿ. ಶ. ೪೮೦ ರಿಂದ ೪೯೫ ಇರಬಹುದೆಂದು ತಿಳಿದಿದೆ.[1] ಬಹುತೇಕ ವಿದ್ವಾಂಸರು ಈ ತೀರ್ಮಾನವನ್ನು ಒಪ್ಪಿ ದ್ದಾರೆ. ಆದ್ದರಿಂದ ಪ್ರಕೃತ ದೊರಕಿರುವ ಶಾಸನವು ಮಾಧವವರ್ಮ್ಮ ಮಹಾಧಿ ರಾಜನ ಆಳ್ವಿಕೆಯ ಪ್ರಥಮ ಸಂವತ್ಸರದ ದಾಖಲೆಯಾಗಿರುವುದರಿಂದ ಶಾಸನದ ಕಾಲವನ್ನು ಕ್ರಿ. ಶ. ೪೮೦ ಎಂದೇ ನಿರ್ಧರಿಸಬೇಕಾಗುತ್ತದೆ.

ಶಾಸನದ ಕನ್ನಡ ಲಿಪಿಯು ಕ್ರಿ. ಶ. ೫ನೆಯ ಶತಮಾನದ ಪೂರ್ವ ಭಾಗಕ್ಕೆ ಸರಿಹೊಂದುತ್ತದೆ. ಶಾಸನದ ಭಾಷೆಯು ಪೂರ್ಣವಾಗಿ ಸಂಸ್ಕೃತದಲ್ಲಿದೆ. ಪರೀಕ್ಷಾ ಲಿಪಿಗಳಾದ ಕ, ಜ, ರ, ಲ, ವ ಗಳು ಇದೇ ರಾಜನ ಮೆಳೇಕೋಟೆ ತಾಮ್ರಶಾಸನದ ಲಿಪಿಗಳೊಂದಿಗೆ ಹೋಲುತ್ತವೆ. ಲಿಪಿಶಾಸ್ತ್ರದ ದೃಷ್ಟಿಯಿಂದ ಈ ಶಾಸನವು ಕ್ರಿ. ಶ. ೫ನೆಯ ಶತಮಾನಕ್ಕೆ ಸೇರುವುದೆಂದು ಖಚಿತವಾಗಿ ಹೇಳಬಹುದು.

ಶಾಸನದಲ್ಲಿ ದೊರೆಯುವ ಮಾಧವ(೩)ನ ವರೆಗಿನ ಗಂಗ ವಂಶಾವಳಿಯು, ಈವರೆಗೆ ದೊರೆತಿರುವ ಮತ್ತು ಅನುಮೋದಿತವಾಗಿರುವ ಗಂಗವಂಶಾವಳಿಯೊಂದಿಗೆ ಹೋಲುತ್ತದೆ :

---

1 ಎನ್. ಲಕ್ಷ್ಮೀನಾರಾಯಣರಾಯರು ಮತ್ತು ಆರ್. ಎಸ್. ಪಂಚಮುಖಿ : ಕರ್ನಾಟಕದ ಅರಸುಮನೆತನಗಳು

ಕೊಙ್ಗಣಿವರ್ಮ್ಮ ಮಹಾರಾಜ



ಮಾಧವ(೧)ವರ್ಮ್ಮ ಮಹಾರಾಜ



ಹರಿವರ್ಮ್ಮ



ವಿಷ್ಣುಗೋಪ



ಮಾಧವ(೩)ವರ್ಮ್ಮ ಮಹಾಧಿರಾಜ

ಮಾಧವ(೩)ವರ್ಮ್ಮನನ್ನು ತಡಂಗಾಲ ಮಾಧವನೆಂದೂ ವಿದ್ವಾಂಸರು ಗುರುತಿಸಿದ್ದಾರೆ.

೩ನೆಯ ಮಾಧವನ ತಂದೆಯಾದ ವಿಷ್ಣುಗೋಪನ ಸೋದರ ೨ನೆಯ ಮಾಧವ (ಸಿಂಹವರ್ಮ್ಮ)ನು ಕ್ರಿ. ಶ. ೪೬೦ ರಿಂದ ೪೭೫ರ ವರೆಗೆ ರಾಜ್ಯಭಾರ ಮಾಡಿರಬಹುದೆಂದು ವಿದ್ವಾಂಸರು ತೀರ್ಮಾನಿಸಿದ್ದಾರೆ.

ಗಂಗರ ಪ್ರಕಟಿತ ಶಾಸನಗಳಲ್ಲಿರುವಂತೆ ಇಲ್ಲಿಯೂ ಪ್ರತಿಯೊಬ್ಬ ರಾಜನಿಗೂ ವಿಶೇಷಣಗಳಿವೆ. ಅವು ಇನ್ನಿತರ ಶಾಸನಗಳಿಗಿಂತ ಸಂಕ್ಷಿಪ್ತವಾಗಿವೆಯಷ್ಟೇ ಹೊರತು ವ್ಯತ್ಯಾಸವಾಗಿಲ್ಲ. ದಾನ ಮಾಡಿರುವ ಮಾಧವವರ್ಮ್ಮನ ವಿಶೇಷಣಗಳು ಇನ್ನಿತರ ಪ್ರಕಟಿತ ಶಾಸನಗಳ ವಿಶೇಷಣಗಳಿಗಿಂತ ವಿಸ್ತಾರವಾಗಿವೆ. 'ಅಮೃತ ವಿಷ ಸಮಪ್ರಸಾದ ಕೋಪೇನ' ಇತ್ಯಾದಿ ಆಲಂಕಾರಿಕ ವಿಶೇಷಣಗಳು ಸಾಹಿತ್ಯಿಕವಾಗಿಯೂ ಈ ಶಾಸನದ ಮೌಲ್ಯ ಹೆಚ್ಚಿಸಿವೆ.

ಇನ್ನಿತರ ಗಂಗರ ಶಾಸನಗಳಲ್ಲಿ ಸಾಮಾನ್ಯವಾಗಿರುವ 'ಸ್ವಖಡ್ಗೈಕ ಮಹಾಶಿಲಾಸ್ತಮ್ಭ ಪ್ರಹರ ಖಣ್ಡಿತ'—ಭಾಗವು ಈ ಶಾಸನದಲ್ಲಿ ಉಕ್ತವಾಗಿಲ್ಲ.

ಈ ಶಾಸನದ ಮೊದಲ ಎರಡು ಹಲಗೆಗಳ ಮತ್ತು ನಂತರದ ಎರಡು (ಕೊನೆಯ) ಹಲಗೆಗಳ ಮೇಲೆ ಹಸ್ತಾಕ್ಷರಗಳಲ್ಲಿ ವ್ಯತ್ಯಾಸವು ಸ್ಪಷ್ಟವಾಗಿ ಗೋಚರವಾಗುತ್ತದೆ. ಆದರೆ ವ್ಯತ್ಯಾಸವು ಹಸ್ತಾಕ್ಷರದಲ್ಲಷ್ಟೇ ಹೊರತು ಲಿಪಿ ಸ್ವರೂಪದಲ್ಲಲ್ಲ. ಇದಕ್ಕೆ ಕಾರಣ ಬಹುಶಃ ಶಾಸನದ ಮೊದಲ ಅರ್ಧಭಾಗವನ್ನು ಒಬ್ಬ ಲಿಪಿಕಾರನೂ ಕೊನೆಯ ಅರ್ಧಭಾಗವನ್ನು ಬೇರೊಬ್ಬ ಲಿಪಿಕಾರನೂ ಬರೆದುಕೊಟ್ಟಿರಬೇಕು. ಲಿಪಿ ಸ್ವರೂಪವಾಗಲೀ, ಭಾಷಾಸ್ವರೂಪವಾಗಲೀ ವ್ಯತ್ಯಾಸವಾಗದಿರುವುದರಿಂದ ಶಾಸನದ ವಿಶ್ವಸನೀಯತೆಯನ್ನು ಅನುಮಾನಿಸಲು ಸಾಧ್ಯವಿಲ್ಲ.

ಈ ಶಾಸನದ ಎರಡನೆಯ ಹಲಗೆಯ ಹಿಂಭಾಗದ ಮೂರನೆಯ ಸಾಲಿನ 'ಲಿ' [ಕಲಿ] ಮತ್ತು ಮೂರನೆಯ ಹಲಗೆಯ ಹಿಂಭಾಗದ ಮೂರನೆಯ ಸಾಲಿನ

'ಲೋ' [ಲೋಭಾತ್ಪ್ರಮಾದಾ] ಎಂಬಲ್ಲಿ 'ಲ'ದ ಸ್ವರೂಪ ಮತ್ತು 'ಇ' ಮತ್ತು 'ಓ'ಕಾರಗಳ ಕಾಗುಣಿತದ ಸ್ವರೂಪಗಳು — ಮತ್ತು — ಮೂರನೆಯ ಹಲಗೆಯ ಹಿಂಭಾಗದ ಮೊದಲನೆಯ ಮತ್ತು ಎರಡನೆಯ ಸಾಲುಗಳಲ್ಲಿ ಮಾತ್ರ 'ಕ' ಮತ್ತು 'ರ'ಗಳು ನಿಶ್ಚಿತ ಕಾಲದ ಸ್ವರೂಪಕ್ಕಿಂತ ಪೂರ್ವಕಾಲದ ಸ್ವರೂಪಕ್ಕೆ ಸೇರುತ್ತವೆ. ಮೂರನೆಯ ಹಲಗೆಯ ಮುಂಭಾಗದ ಮೊದಲ ಸಾಲಿನ 'ವಿಚ್ಛಿನ್ನ' ಎಂಬಲ್ಲಿ 'ಛ'ವೊತ್ತು ಮತ್ತು ಅದೇ ಹಲಗೆಯ ಕೊನೆಯ ಸಾಲಿನ ಮೊದಲ ಅಕ್ಷರ 'ಉ' ನಿಶ್ಚಿತ ಕಾಲಕ್ಕೆ ಸೇರುತ್ತವೆ.

ಲಿಪಿಶಾಸ್ತ್ರದ ದೃಷ್ಟಿಯಿಂದಂತೂ ಈ ಶಾಸನ ಕೃತಕವಾಗಿ ಕಾಣುವುದಿಲ್ಲ.

ಈವರೆಗೆ ೩ನೆಯ ಮಾಧವನ ಆರು ತಾಮ್ರಶಾಸನಗಳು ದೊರಕಿದ್ದು ಅವುಗಳ ಪೈಕಿ ತಾಗರ್ತಿ[1] ತಾಮ್ರಪಟಗಳು ಲಿಪಿ ಮತ್ತು ಭಾಷಾ ಸ್ವರೂಪದಿಂದಲೂ ನೊಣಮಂಗಲ[2] ತಾಮ್ರಪಟಗಳು ಅಶುದ್ಧ ಭಾಷೆ ಮತ್ತು ಅರ್ವಾಚೀನ ಲಿಪಿ ಸ್ವರೂಪದಿಂದಲೂ ಭಿಂಟವಾಡಿ[3] ತಾಮ್ರಪಟಗಳು ಆ ಕಾಲಕ್ಕೆ ಹೊಂದದ ಪೂರ್ಣ ಕನ್ನಡ ಭಾಷೆಯಲ್ಲೇ ಇರುವುದರಿಂದಲೂ ಕೃತಕ ಎಂದು ತೀರ್ಮಾನಿತವಾಗಿವೆ. ಅಪೂರ್ಣವಾಗಿ ದೊರೆತಿರುವ ಮೇಳೇಕೋಟೆ[4], ಕೆರಗಲೂರು[5], ಕಂಡಸಾಲ್[6] ತಾಮ್ರ ಪಟಗಳು ವಿಶ್ವಸನೀಯವೆಂದು ಸ್ವೀಕೃತವಾಗಿವೆ.

೩ನೆಯ ಮಾಧವನ ವಿಶ್ವಸನೀಯ ತಾಮ್ರಶಾಸನಗಳ ಜೊತೆಗೆ ಚಲುವನ ಹಳ್ಳಿಯ ತಾಮ್ರಪಟಗಳನ್ನೂ ಸೇರಿಸಬಹುದಾಗಿದೆ.*



---

1 ಎ. ಕ. vii, ಶಿಕಾರಿಪುರ ೫೨

2 ಎ. ಕ. x, ಮಾಲೂರು ೭೩

3 ಎ. ಕ. xii, ತುಮಕೂರು ೨೮

4 ಎಂ. ಎ. ಆರ್. ೧೯೩೦

5 ಎ. ಆರ್. ಎಂ. ಎಸ್. ಐ. ಇ. ೧೯೩೯–೪೦

6 ಎಂ ಎ. ಆರ್. ೧೯೨೪–೨೫

* ಈ ತಾಮ್ರಪಟಗಳನ್ನು ಅಧ್ಯಯನಕ್ಕೆ ದೊರಕಿಸಿಕೊಟ್ಟ ಶ್ರೀ ಕೆ.ಎಸ್. ರಾಮಮೂರ್ತಿ ಮತ್ತು ಶಾಸನದ ಛಾಯಾಚಿತ್ರಗಳನ್ನು ತೆಗೆದುಕೊಟ್ಟ ಡಾ॥ ಕೃಷ್ಣಾನಂದ ಕಾಮತ್ ಅವರುಗಳಿಗೆ ಕೃತಜ್ಞತೆಗಳು.

ಈ ಲೇಖನವನ್ನು ೧೯೭೪ ಜನವರಿ ಮೊದಲ ವಾರದಲ್ಲಿ ಮಿಥಿಕ್ ಸೊಸೈಟಿಯಲ್ಲಿ ನಡೆದ ಶಾಸನ ಸಮ್ಮೇಳನದಲ್ಲಿ ಓದಲಾಗಿತ್ತು.

# ಕನ್ನಡ ಸಾಹಿತ್ಯದಲ್ಲಿ ಮಲ್ಲಿಗೆ

ಟಿ.ಆರ್. ಮಹಾದೇವಯ್

ಹೂಗಳು ನಿಸರ್ಗವು ಮಾನವನಿಗೆ ಇತ್ತ ಸುಂದರ ಕಾಣಿಕೆ ; ನರುಗಂಪಿ
ಉಡುಗೊರೆ ; ಸುಮಧುರ ಕೊಡುಗೆ. " ಹೂವೆ ಚೆಂದಕೆ ಅರಸ, ಚಂದದೊ
ಇದು ಸರಸ, ಇದುವೆ ಚೆಂದದ ಗುಡಿಯ ಗೋಪುರಕೆ ಕಳಸ" ಎಂದಿರುವ ವರಕ
ಬೇಂದ್ರೆ ಭೂತಾಯಿ ತನಗೆ ಸಂತೋಷವಾದಾಗ ' ಫೂ ' ಎಂದು ಉಸಿರ್ಗರೆದಳು,
ಅದೇ ಹೂವಾಗಿ ಅರಳಿತು ಎನ್ನುತ್ತಾರೆ: "ನನೆಯಾಗಿ ಮೊನೆಯಾಗಿ ಮುಗುಳಾ
ಅರಳಾಗಿ ಫುಃ ಎಂದು ಬಿಟ್ಟುಸಿರೆ ತಾನೆ ಹೆಸರ್ಹಾಯ್ತು" (ಗರಿ : ೭೪). "ಕಲ್ಲು ಮಣ್ಣು
ಹೆಂಟೆ ಮುಳ್ಳು ಅವುಗಳ ನಡುವೆ ಇದೆ ಕೋ ರತ್ನ | ಮುಳ್ಳು ಮಣ್ಣು ನೊರಜ
ನಡುವೆ ಇಕೋ ಹೊಚ್ಚ ಹೊಸ ಹೊನ್ನಕ್ಷತ್ರ" (ಚೆಲುವು : ೫) ಎಂದು ಶ್ರೀನಿವಾಸರ
ಬೆರಗುಪಟ್ಟಿದ್ದಾರೆ. "ಬಣ್ಣದ ರೂಪದ ಭಗವತ್‌ಪ್ರೇಮಂ ಕಣ್ಣನು ಚುಂಬಿಸಿದೆ
(ಅನಿಕೇತನ : ೩೫) ಎಂದಿರುವ ರಾಷ್ಟ್ರಕವಿ ಕುವೆಂಪು "ಹೂಗಳು ಶಿವಮುಖ
ಚಂದ್ರಿಕೆ" ಎಂದು ಅಭಿಪ್ರಾಯಪಟ್ಟಿದ್ದಾರೆ. "ಸೃಷ್ಟಿಮಥನದಲ್ಲಿ ಉದಿಸುವ ಅಮೃ
ಹೂವಾಗಿ ಅರಳಿಹುದು" ಎನಿಸಿದೆ ಕಾವ್ಯಾನಂದರಿಗೆ (ಕರುಣಾಶ್ರಾವಣ : ೫೫).
ನಿಜ, ಹೂ ಸೌಂದರ್ಯದ ಕಣ್ಣು ; ಚೆಲುವಿನ ನೆಲೆ ; ಕಲೆಯ ಬಲೆ. ಹೂಗ
ಆಕರ್ಷಣೆಗೆ ಕಾರಣ ಅದರ ಆಕಾರ, ಕೋಮಲತೆ, ಬಣ್ಣ ಮತ್ತು ವಾಸನೆ
ಮೃದುತ್ವ ಮತ್ತು ನಿರ್ಮಲತೆಗೆ ಮತ್ತೊಂದು ಹೆಸರೇ ಹೂ. ಅದಕ್ಕೇ, ಹೂಗಳೆಂದ
ಎಲ್ಲರಿಗೂ ಪ್ರಾಣ.

ಮುಂಜಾನೆ ಅರಳಿ ಸಂಜೆವರೆಗೆ ನಗುನಗುತ್ತಾ ಇದ್ದು ಅನಂತರ ಬಾಡಿ ಬಿದ್ದು
ಹೋಗುವ ಹೂವಿನದು ಅಲ್ಪಕಾಲಿಕ ಬದುಕು. ಆದರೆ ಅದು ಎಂಥ ಸಾರ್ಥ

ಹಾಗೂ ಧನ್ಯತೆಯ ಬದುಕು! "ನಿಮ್ಮಿರವಿನ ಒಂದೇ ಕ್ಷಣ, ಶತವರ್ಷದ ನರ ಜೀವನ . . . ನರನಾಗದೆ ನರುಗಂಪಿನ ಅರಳಾಗಿರೆ ನಾನು ಲೇಸಿದ್ದಿತು, ಬೇಸತ್ತಿಹೆ ಈ ಬದುಕಿಗೆ, ಫಲವೇನು" (ಕರುಣಾಶ್ರಾವಣ : ೨೯) ಎಂದು ಕವಿ ಉದ್ಗಾರ ತೆಗೆಯುವಷ್ಟು ಹೂಗಳ ಬಾಳು ಆದರ್ಶವಾಗಿದೆ.

ಹೂಗಳಲ್ಲಿ ಮಲ್ಲಿಗೆ ಪ್ರಸಿದ್ಧ. ಅದು ಆಕಾರದಲ್ಲಿ ಕಿರಿದಾದರೂ ಅಗ್ಗಳಿಕೆ ಯಲ್ಲಿ ಹಿರಿದಾಗಿದೆ; ಗುಣದಲ್ಲಿ ಅತಿಶಯವೆನ್ನಿಸಿದೆ. ಮಲ್ಲಿಗೆ ಶುಭ್ರತೆಗೆ, ಕೋಮಲತೆಗೆ, ಪ್ರಸನ್ನತೆಗೆ ಬೇರೊಂದು ಹೆಸರು. "ಮಲ್ಲಿಗೆಯೆಂದರೆ ಅದೊಂದು ಮಾರ್ದವದ ಹಿರಿಮೆಯುಳ್ಳ ಹೂ; ಮಾಧುರ್ಯವನ್ನು ತುಂಬಿಹಿಡಿದ ಹೂ. ಇಂಥ ಹೂ ಅರಳಿ ನಕ್ಕಾಗ ಅದರಿಂದ ಸೌರಭವು ಸೂಸಿದಾಗ ಉಂಟಾಗುವ ಮುದ ಮಾತಿಗೆ ನಿಲುಕದ್ದು" (ಮಲ್ಲಿಗೆ ನಗುತಾವ-ಕರಾಕೃ). ಅದಕ್ಕೇ ಆದಿಕವಿ ಪಂಪ ಇಮ್ಮಾವು ಮತ್ತು ಮಲ್ಲಿಗೆಗಳು "ಸಂಸಾರ ಸಾರಸರ್ವಸ್ವ ಫಲ" ಎಂದಿರುವುದು!

ಮಲ್ಲಿಗೆ ಚೆಲುವಿನ ಪ್ರತಿರೂಪ. ಅದನ್ನು ಕಂಡೇ, ಸಾಳ್ವ "ಅತಿಲಾವಣ್ಯ ವಾರಿಯನೆಱೆದು ಸಲಹಿದ ಮಲ್ಲಿಕಾಲತೆ" ಎಂದು ವರ್ಣಿಸಿರುವುದು (ಸಾಳ್ವ ಭಾರತ: ೫-೯೦). ಇದರಷ್ಟು ನವುರಾದ ವಾಸನೆ, ಕಣ್ಣು ತುಂಬುವ ಶುಭ್ರ ಶ್ವೇತವರ್ಣ, ಕೋಮಲ ಸ್ಪರ್ಶವಿರುವ ಹೂ ಬೇರೊಂದಿಲ್ಲವೆಂದರೆ ನಿಜವನ್ನೇ ನುಡಿ ದಂತೆ. ಅದರಲ್ಲಿಯೂ 'ಮೈಸೂರು ಮಲ್ಲಿಗೆ' ತುಂಬಾ ಹೆಸರುವಾಸಿ. (ಕೆ.ಎಸ್. ನರಸಿಂಹಸ್ವಾಮಿ ಅವರ ಅದೇ ಹೆಸರಿನ ಕವನಸಂಕಲನ ಪ್ರಸಿದ್ಧ). "ಹೊಟ್ಟೆಗೆ ಹಿಟ್ಟಿಲ್ಲ ಜುಟ್ಟಿಗೆ ಮಲ್ಲಿಗೆ" ಎಂಬ ಗಾದೆಯ ಹಿಂದೆ ಇರುವ ಅನುಭವ ಅಪಾರ. ಮಲ್ಲಿಗೆ ಬರೀ ಹೂವಲ್ಲ; ಅದು ರಸಿಕತೆಯ, ರಸಜ್ಞತೆಯ ದ್ಯೋತಕ ಎಂಬುದು ಇಲ್ಲಿ ಧ್ವನಿತವಾಗುತ್ತದೆ. ನಿಜ, ಹೊಟ್ಟೆ ಹಸಿದು ತಾಳ ಹಾಕುತ್ತಿದ್ದರೂ ಮಲ್ಲಿಗೆಯ ಸುವಾಸನೆ, ಅದರ ಕೋಮಲತೆಗಳು ಮನಸ್ಸನ್ನು ಸೆರೆಹಿಡಿದು, ದಣಿದ ದೇಹಕ್ಕೆ, ಬೇಸರಗೊಂಡ ಮನಕ್ಕೆ ಮುದವನ್ನು ಒದಗಿಸುತ್ತವೆ. ಹಸಿದ ಹೊಟ್ಟೆಯೂ ತುಂಬಿ ಹೋಗುತ್ತದೆ! 'ತೋಟಕ್ಕೆ ಹೋದ ಅಣ್ಣಯ್ಯ ಯಾಕಿಷ್ಟು ತಡಮಾಡಿದ? ಊಟವನ್ನು ಮರೆತು ಏನು ಮಾಡುತ್ತಿದ್ದಾನು' ಎಂದು ಮನೆಯಲ್ಲಿ ಯೋಚಿಸುವ ತಂಗಿಗೆ ಹೊಳೆದದ್ದು ಇಷ್ಟು: "ತೋಟದ ಮಲ್ಲಿಗೆ ಮುಡಿದು ಊಟದ ಹಂಬಲ ಮರೆತಾನು" (ಗರತಿ ಹಾಡು : ೬೩)— ಇದು ಜನಪದರ ಅನುಭವ. ಅಂದರೆ, ಮನುಷ್ಯ ಬರೀ ಹೊಟ್ಟೆ ತುಂಬಿಸಿಕೊಳ್ಳಲು ಮಾತ್ರ ಬದುಕಿಲ್ಲ. ಪ್ರಾಣಿಗಳಿಗಿಲ್ಲದ ಸೌಂದರ್ಯಪ್ರಜ್ಞೆ, ರಸಜ್ಞತೆ ಅವನಿಗುಂಟು. ಅಂತೆಯೇ ಅವನು ಕಲಾರಾಧಕ ನಾಗಿದ್ದಾನೆ. ಆದ್ದರಿಂದ ಮಲ್ಲಿಗೆ ಮಾನವನ ಗುಣವೊಂದನ್ನು ಪ್ರಕಾಶಪಡಿಸುವ ಸಾಧನವಾಗಿ ನಿಲ್ಲುತ್ತದೆ. "ನಿನ್ನಲ್ಲಿ ಮೂರು ಕಾಸಿದ್ದರೆ ಒಂದು ಕಾಸಿನ ಅತ್ತರು ಕೊಳ್ಳು, ಒಂದು ಕಾಸಿನ ಮಲ್ಲಿಗೆ ಕೊಳ್ಳು, ಇನ್ನೊಂದು ಕಾಸನ್ನು ದಾನಮಾಡು" ಎಂದಿದೆ ಒಂದು ಅನುಭವವಾಣಿ. ಇಂಥ ಮಾತುಗಳಿಂದ ಮಲ್ಲಿಗೆಯು ಕಲಾಭಿ

ರುಚಿಯ, ಸಂಸ್ಕೃತಿ ಸಂಪನ್ನತೆಯ, ಸದಭಿರುಚಿಯ ಪ್ರತೀಕವೆಂದು ಆದರಿಸಲ್ಪಟ್ಟಿರುವುದು ಸ್ಪಷ್ಟವಾಗಿ ಕಾಣುತ್ತದೆ.

'ಹಸಿರು ಹಚ್ಚಡದಾಗ ಮೊಸರು ಚೆಲ್ಲ್ಕೈತಿ' (ಕನ್ನಡ ಸಾವಿರದ ಒಗಟುಗಳು : ೧೨೪) ಎಂಬುದೊಂದು ಒಗಟು. ಇದಕ್ಕೆ ಕರ್ನಾಟಕದ ಉತ್ತರ ಭಾಗದಲ್ಲಿ 'ಹತ್ತಿಗಿಡ' ಎಂದರ್ಥವಿದೆ. 'ಹಸಿರು ಗಿಡದ ಮೇಲೆ ಮೊಸರು ಚೆಲ್ಲಿದೆ' ಎಂಬ ಒಗಟು ಕರ್ನಾಟಕದ ದಕ್ಷಿಣ ಭಾಗದಲ್ಲಿ ಬಳಕೆಯಲ್ಲಿದ್ದು 'ಮಲ್ಲಿಗೆ' ಎಂಬ ಅರ್ಥ ಮಾಡಲಾಗುತ್ತಿದೆ. ಹೀಗೆ ಈ ಒಗಟು ಹಸಿರು ಹಿನ್ನೆಲೆಯಲ್ಲಿ ಅರಳಿದ ಬಿಳಿವರ್ಣದ ಮಲ್ಲಿಗೆ ಹೂಗಳ ಚಿತ್ರವನ್ನು ಕಣ್ಣಿಗೆ ಕಟ್ಟುತ್ತದೆ. 'ದೇವಮಲ್ಲಿಗೆ' ಎಂಬುದು ಬತ್ತದಲ್ಲಿ ಒಂದು ಬಗೆ; ಬಹುಶಃ ಅದರ ಶುಭ್ರತೆಯಿಂದ ಆ ಹೆಸರು ಅನ್ವರ್ಥವಾಗಿ ಬಂದಿರಬಹುದು. ಕೆಲವು ಊರುಗಳಿಗೂ ಮಲ್ಲಿಗೆ ಹೆಸರನ್ನು ಕರೆದಿರುವುದುಂಟು. ಅರಳುಮಲ್ಲಿಗೆ, ಮಲ್ಲಿಗೆವಾಳು, ಮಲ್ಲಿಗೇನಹಳ್ಳಿ, ಕೂಡುಮಲ್ಲಿಗೆ ಇತ್ಯಾದಿ. ಇಂಥ ಊರುಗಳ ಹೆಸರು ಕೇಳಿ ಮಾಸ್ತಿಯವರು ಹೀಗೆಂದಿದ್ದಾರೆ: "ಏನು ಹೆಸರು ಇವು, ನಮ್ಮ ತಾತಂದಿರು ನಾಡೊಳಿಟ್ಟ ಹೆಸರು; ಜೇನ ಸವಿಯುವೊಲು ಇನಿದು, ಬಲ್ಲವರ ಹಾಡಿನೊಲು ಮೆಲಿತು" (ಚೆಲುವು : ೫೪).

ಮಲ್ಲಿಗೆಯನ್ನು ಮುಡಿಯ ಬಯಸದ ಹೆಣ್ಣಿಲ್ಲ; ಅದರ ಸುವಾಸನೆಗೆ ಮರುಳಾಗದ ರಸಿಕರಿಲ್ಲ; ಅದನ್ನು ಹೋಲಿಕೆಗೆ ಬಳಸಿ ಮಾತನಾಡದವರಿಲ್ಲ; ಅದನ್ನು ಕಾವ್ಯದಲ್ಲಿ ಹಾಡಿ ಹೊಗಳದ ಕವಿಗಳಿಲ್ಲ. ಅಷ್ಟು ಅದರ ಕೀರ್ತಿ, ಪ್ರತಿಷ್ಠೆ, ವೈಭವ. ಹೂಗಳನ್ನು ಹಾಡಿಹೊಗಳಲೆಂದೇ ಪ್ರತ್ಯೇಕ ಕಾವ್ಯವೊಂದನ್ನು ಮೀಸಲಿಟ್ಟ ಹರಿಹರ. ಆತನ 'ಪುಷ್ಪರಗಳೆ' ಹೂಗಳ ಬಗೆಗಿನ ವೈಶಿಷ್ಟ್ಯಪೂರ್ಣ ನುಡಿಚಿತ್ರವನ್ನೇ ನೀಡುತ್ತದೆ. ಆತನ ಬಣ್ಣನೆಯಲ್ಲಿ "ಅಳಿಯೆಱಗದನಿಲನಲುಗದ ರವಿಕರಂಪುಗದ ಹಸುರಳಿದು ಬಿಳುಪುಳಿದ ಸುರುಚಿರಮಪ್ಪ ಮಿಸಲ ಮೊಗ್ಗೆಯಂ ಕೊಯ್ದು.... (ಬಸವರಾಜದೇವರ ರಗಳೆ : ೩-೨೯) ಮೊದಲಾದವು ಅತ್ಯಂತ ಸಹಜ ಹಾಗೂ ಆತ್ಮೀಯವೆನಿಸಿವೆ. ಅನೇಕ ಕವಿಗಳು ತಮ್ಮ ಕಾವ್ಯದ ಪ್ರೌಢಿಮೆಯನ್ನು ಹೇಳಿಕೊಳ್ಳುವಾಗ 'ಅದು ಅರಳಿದ ಮಲ್ಲಿಗೆ ಬಳ್ಳಿಯಂತೆ ಕಂಗೊಳಿಸುವುದೆಂದು' ಹೆಮ್ಮೆಪಟ್ಟಿದ್ದಾರೆ: "ಇನಿಯಳ ಸೋಂಕಿನಂತೆ... ನನೆಯೇಱಿದ ಮಲ್ಲಿಗೆಯಂತೆ ಪೂರ್ಣ ಚಂದ್ರನ ಸಿರಿಯಂತೆ" (ಜಗನ್ನಾಥವಿಜಯ : ೧-೧೬) ತನ್ನ ಕಾವ್ಯವಿದೆ ಎಂದು ರುದ್ರಭಟ್ಟ ಅಭಿಮಾನ ಪಟ್ಟಿದ್ದಾನೆ.

ಮಲ್ಲಿಗೆ ನಮ್ಮ ಕವಿಗಳ ಕಣ್ಣಿಗೆ, ರಸಿಕರ ಬುದ್ಧಿಗೆ, ಸಹೃದಯಿಗಳ ಮನಕ್ಕೆ ಬರೀ ಹೂವಾಗಿ ಕಂಡಿಲ್ಲ, ಹೊಳೆದಿಲ್ಲ, ಅನಿಸಿಲ್ಲ. ಅದು ಒಂದು ಸಜೀವವಾದ, ಮಾನವ ಗುಣಗಳನ್ನುಳ್ಳ ಸಚೇತನ ವ್ಯಕ್ತಿ, ಶಕ್ತಿ. ಅಂತೆಯೇ ಅದಕ್ಕೆ ವ್ಯಕ್ತಿತ್ವ ಮೂಡಿಬಂದಿದೆ. ಹಾಗೆಂದೇ ಮಲ್ಲಿಗೆಗೆ ವಿವಿಧ ಶಕ್ತಿಗಳು, ವಿವಿಧ ಸಂಬಂಧ-

ಸಂವೇದನೆಗಳು ಆರೋಪಿತವಾಗಿವೆ. ಅವುಗಳನ್ನು ವ್ಯಕ್ತಪಡಿಸುವ ರೀತಿಯಲ್ಲಿ ನಮ್ಮ ಕವಿಗಳ ಕಲ್ಪನಾಶಕ್ತಿ, ಕಲಾವಂತಿಕೆ, ಪ್ರೌಢಿಮೆಗಳು ವ್ಯಕ್ತವಾಗಿವೆ.

ಮಲ್ಲಿಗೆ ಕೆಲವರಿಗೆ ಸಿರಿವಂತಿಕೆಯ, ಸೌಭಾಗ್ಯದ ಸಂಕೇತ. ಒಂದು ನಾಡಿನಲ್ಲಿ ಎಲ್ಲವೂ ಇದೆ; ಅದು ಸಂಪದ್ಭರಿತವಾಗಿದೆ ಎಂದು ಹೇಳುವಾಗ ಕೊಡುವ ಪಟ್ಟಿಯಲ್ಲಿ ಕವಿಗಳು ಮಲ್ಲಿಗೆಯನ್ನು ಸೇರಿಸಿದ್ದಾರೆ: "ಮಲ್ಲಿಗೆಯಲ್ಲದೆ ಸಂಪಗೆಯಲ್ಲದೆ ಚೆಂದೆಂಗಲ್ಲದೆ ಮಾವಲ್ಲದೆ ಕೌಂಗಲ್ಲದೆ ಗಿಡುಮರಗಳೆಂಬುವಿಲ್ಲಾ ನಾಡೊಳ್" (ಕಬ್ಬಿಗರ ಕಾವ: ೨೧). ಪಂಪನಂತೂ ಮಲ್ಲಿಗೆಯನ್ನು 'ಸಂಸಾರ ಸಾರಸರ್ವಸ್ವಫಲಗಳ' ಪಟ್ಟಿಗೇ ಸೇರಿಸಿಬಿಟ್ಟಿದ್ದಾನೆ:

> ಆವಲರುಂ ಪಣ್ಣುಂ ಬೀ
> ತೋವವು ಗಡ ಬೀಯವಲ್ಲಿ ಮಲ್ಲಿಗೆಗಳುಮಿ
> ನ್ಮಾಮ್ರವುಗಳುಮೆಂದೊಡಿನ್ ಪೆಱ
> ತಾವುದು ಸಂಸಾರಸಾರಸರ್ವಸ್ವಫಲಂ (ಪಂಪಭಾರತ: ೧-೫೫).

'ಮಲ್ಲಿಗೆ' ಪದವು ಸಂಸ್ಕೃತದ 'ಮಲ್ಲಿಕಾ'ದಿಂದ ಬಂದುದು. ಇದಕ್ಕೆ ಸಸ್ಯಶಾಸ್ತ್ರದ ಹೆಸರು Jasminum Sambac Ait. ಮಲ್ಲಿಗೆಯ ಸಮಾನಾರ್ಥಕ ಪದಗಳು ಇವು: ತೃಣಶೂನ್ಯಂ, ಮಲ್ಲಿಕಾ, ಭೂಪದೀ ಶೀತಭೀರುಃ—ಈ ೪ ಮಲ್ಲಿಗೆ (ನಾಚಿರಾಜೀಯ ನಿಘಂಟು: ೧೦೪). ತೃಣಶೂನ್ಯಂ, ಮಲ್ಲಿಕಾ, ಭೂಪದೀ, ಶೀತಭೀರುಃ—೪ ಮಲ್ಲಿಗೇ ಗಿಡದ ಹೆಸರುಗಳು (ಅಮರಕೋಶ, ಸಿದ್ಧಾಂತಿ: ೧೨೪); ಮಲ್ಲಿಗೆ ವಿಚಕಿಳಂ ದುಂಡುಮಲ್ಲಿಗೆಯು (ಮಂಗರಾಜ ನಿಘಂಟು: ३೪).

ಮಲ್ಲಿಗೆಯನ್ನು ಬೆಳೆಸುವುದರಲ್ಲಿ ವೈಶಿಷ್ಟ್ಯವಿದೆ. ಅಂಟುಗಳನ್ನು ಹಚ್ಚಿ ಮಲ್ಲಿಗೆಯನ್ನು ಬೆಳೆಸಬೇಕು. ಬೀಜವೃಕ್ಷನ್ಯಾಯದಿಂದ ಇದು ಹೊರತು. ಮಲ್ಲಿಗೆಯಲ್ಲಿ ಅನೇಕ ಜಾತಿಗಳಿವೆ. ಅಡವಿಮಲ್ಲಿಗೆ, ಕದರುಮಲ್ಲಿಗೆ, ಕಸ್ತೂರಿ ಮಲ್ಲಿಗೆ, ಕೋಲುಮಲ್ಲಿಗೆ, ಸೂಜಿಮಲ್ಲಿಗೆ, ಗಿರಿಮಲ್ಲಿಗೆ, ಜಾಜಿಮಲ್ಲಿಗೆ, ದುಂಡುಮಲ್ಲಿಗೆ, ಕಾಡುಮಲ್ಲಿಗೆ, ಸಂಜೆಮಲ್ಲಿಗೆ, ಹಸುರುಮಲ್ಲಿಗೆ, ನಿತ್ಯಮಲ್ಲಿಗೆ, ದೋಸೆಮಲ್ಲಿಗೆ, ಹವಳಮಲ್ಲಿಗೆ, ಮೊಲ್ಲೆಮಲ್ಲಿಗೆ, ನಾಗಮಲ್ಲಿಗೆ, ಚಂಡುಮಲ್ಲಿಗೆ (ಕೃಷಿಜ್ಞಾನ ಪ್ರದೀಪಿಕೆ: ೨೦೧). ಹಂಬುಮಲ್ಲಿಗೆ, ಸಣ್ಣಮಲ್ಲಿಗೆ, ಸೂಜಿಮಲ್ಲಿಗೆ, ಸ್ವರ್ಣ ಮಲ್ಲಿಗೆ, ಹಸುರುಜಾಜಿಮಲ್ಲಿಗೆ, ಸಣ್ಣಜಾಜಿಮಲ್ಲಿಗೆ, ಬಾಸ್ತಿಮಲ್ಲಿಗೆ, ವಾರ ಮಲ್ಲಿಗೆ, ಗುಂಡುಮಲ್ಲಿಗೆ, ತುರುಕಮಲ್ಲಿಗೆ, ಮದರಾಸುಮಲ್ಲಿಗೆ (ಮೈಸೂರು ಔಷಧಿ ಗಿಡಗಳು: ೪೭, ೭೭). ಇದಲ್ಲದೆ 'ಏಳುಸುತ್ತಿನ ಮಲ್ಲಿಗೆ'ಯೊಂದಿದೆ. ಹೆಚ್ಚು ಸುವಾಸನೆಯಿಂದ ಕೂಡಿದ ಈ ಬಗೆ ನಯನ ಮನೋಹರ. 'ಕರಿಯಮಲ್ಲಿಗೆ' ಎಂಬ ಅಪೂರ್ವವಾದ ಮಲ್ಲಿಗೆ ಜಾತಿಯೂ ಇದೆ: ಶರಣರ ಸಂದಣಿಯು ತಮ್ಮ ಪೂಜೆಗೆ ಎಂಥ ಅಪೂರ್ವವಸ್ತು ಬೇಕೆಂದರೂ ಬಸವಣ್ಣ ಒದಗಿಸುತ್ತಿದ್ದನೆಂದು

ಹರಿಹರ ಹೇಳುವಾಗ ಇದು ಬಂದಿದೆ: "ದೇವಲೋಕದ ಕಮಲವೆಮಗೆ ಬೇಕೆಂದಡಂ . . . ಕರಿಯಮಲ್ಲಿಗೆಯನೆಮ್ಮೀಶ್ವರಂಗೆಂದಡಂ ಕೋಡದೆ ಕೊಂಕದೆ ಕುಂದದೆ ಬಾಡದೆ ಬಳ್ಕದೆ ಬೆದರದೆ ಬೆಚ್ಚದೆ" ತಂದೀಯುತ್ತಿದ್ದನು (ಬಸವರಾಜ ದೇವರ ರಗಳೆ : ೭-೬೫); ಇದಲ್ಲದೆ ಇನ್ನು ಕೆಲವು ಕಾವ್ಯಗಳಲ್ಲಿ ಇದರ ಉಲ್ಲೇಖವಿದೆ: "ಕರಿಯಮಲ್ಲಿಗೆಯಲರ ಮಳೆ ಸುರಿಯೆ" (ರೇವಣಸಿದ್ಧೇಶ್ವರ ಕಾವ್ಯ : ೧೩೩-೧೩); "ಕಾಮಕಸ್ತೂರಿ ಕರಿಯಮಲ್ಲಿಗೆ ಪ್ರೇಮದೊಳ್ ವನಮೊಪ್ಪಿತು" (ಗೋವಿನ ಹಾಡು : ೫೫-೨). ಕಮಲವನ್ನು ಕೆಸರಿನಲ್ಲಿ ಅರಳಿದ ಮಲ್ಲಿಗೆ, 'ಕೆಸರ್ಮಲ್ಲಿಗೆ' ಎಂದು ಕರೆದಿದ್ದಾರೆ. "ಕೆಸರ್ಮಲ್ಲಿಗೆ, ಸಿರಿಯ ಕರುಮಾಡಂ, ತಾಮರೆ, ನೀರ್ವೂ— ಈ ೪ ಕಮಲಕ್ಕೆ ಪೆಸರು" (ಕರ್ಣಾಟಕ ಶಬ್ದಸಾರ : ೧೬೫); "ಉಳ್ಳಲರ್ದ ಕೆಸರ್ಮಲ್ಲಿಗೆಯ ತಾಯ್ವೇರ್ ತಳದಿಂ ಮುಱಿಯೆ" (ರಾಮಾಶ್ವಮೇಧ : ೧೧-೩೧). ಇವಲ್ಲದೆ 'ಆಕಾಶಮಲ್ಲಿಗೆ' ಎಂಬ ಜಾತಿಯೂ ಉಂಟು.

ಮಲ್ಲಿಗೆಯ ದೊಡ್ಡತನ: ಮಲ್ಲಿಗೆ ತನ್ನಷ್ಟಕ್ಕೆ ತಾನು ಸುವಾಸಿಕವಾಗಿ ಪಾವನವೆನಿಸಿ ಸುಮ್ಮನಾಗಲಿಲ್ಲ. ತನ್ನ ಸತ್ವಪೂರ್ಣ ವ್ಯಕ್ತಿತ್ವದಿಂದ ತನ್ನ ಬಳಿಗೆ ಸಂದ ಅನ್ಯವಸ್ತುವನ್ನೂ ಪಾವನವಾಗಿಸಿತು : "ಮಲ್ಲಿಗೆ ಹೂವಿನಿಂದ ಬಾಳೆಯ ನಾರು ಪಾವನವಾಯಿತು" (ಕನ್ನಡ ಗಾದೆಗಳ ಕೋಶ : ೮೬) ಎಂಬುದು ಒಂದು ಗಾದೆ. ತನ್ನ ಸದ್ಗುಣದಿಂದ ಬಾಳೆಯನ್ನು ಸ್ವರ್ಗಕ್ಕೆ ಒಯ್ದುದು ಮಲ್ಲಿಗೆಯ ದೊಡ್ಡ ಗುಣ. ಇನ್ನೊಬ್ಬರನ್ನು ಉದಾತ್ತಗೊಳಿಸುವಷ್ಟು ಉಜ್ವಲ ಮಲ್ಲಿಗೆಯ ಗುಣ ಎಂದಂತಾಯಿತು. ಅದಕ್ಕೇ ಅದನ್ನು ಹೋಲಿಸಿ ಅಗ್ಗಳಿಕೆಯ ನುಡಿವುದೂ ಉಂಟು. "ಕೊಳೆವಳ್ಳಿಯ ಗಿಡುಗಳಂ ನಟ್ಟು ನೀರೆಱೆದು ನಡಪೆ ಮಲ್ಲಿಗೆಯ ಪೂವಿನಂತಾಗಲಱಿಯವು" (ಧರ್ಮಾಮೃತ : ೭-೭೯). ಗುರು ಅಜಿತಸೇನನ ಕೀರ್ತಿ ಮಲ್ಲಿಗೆಯೊಂದಿಗೆ ಪೈಪೋಟಿಮಾಡಿತು (ಎಪಿಗ್ರಾಫಿಯ ಇಂಡಿಕಾ, III, ಪು. ೧೯೫, ಸಾಲು ೧೬೦ ; ಕಾಲ ೧೧೨೯) ಎಂಬ ಶಾಸನದ ಉಲ್ಲೇಖವು ಮಲ್ಲಿಗೆಯ ಕೀರ್ತಿಯನ್ನೇ ಎತ್ತಿ ಹಿಡಿದಿದೆ.

ಪಂಪನಂಥ ಕವಿಗೆ ಮಲ್ಲಿಗೆ ಬರಿಯ ಹೂವಾಗಿ ಕಾಣಿಸುವುದಿಲ್ಲ. ಅದರ ಹಿಂದೆ ಏನೋ ಒಂದು ಪರಂಪರೆ, ಒಂದು ಸಂಸ್ಕೃತಿ ; ಏನೋ ಒಂದು ದಿವ್ಯಪ್ರೀತಿ, ಅಭಿಮಾನ ಅಡಗಿದೆ ಎನ್ನಿಸುತ್ತದೆ. ಅರಳಿದ ಮಲ್ಲಿಗೆಯನ್ನು ಕಂಡಾಗ ಅವನಿಗೆ ತಾಯ್ನಾಡ ನೆನಪಾಗುವುದು :

ಬಿರಿದ ಮಲ್ಲಿಗೆಗಂಡೊಡಮಾದ ಕೆಂದಲಂಪಂ ಗೆಡೆಗೊಂಡೊಡಂ
ಮಧುಮಹೋತ್ಸವವಾದೊಡಂ ನೆನೆವುದೆನ್ನ ಮನಂ ಬನವಾಸಿದೇಶಮಂ

(ಪಂಪಭಾರತ : ೪-೩೦).

ನಾಡಿನ ನೈಸರ್ಗಿಕ ಸಂಪತ್ತನ್ನು ಕುರಿತು ಹೇಳುವಾಗ ಕವಿಗಳು ಕೊಡುವ ಪಟ್ಟಿಯಲ್ಲಿ ಮಲ್ಲಿಗೆ ಸೇರಿದೆ. ಅಷ್ಟೇ ಅಲ್ಲ; ಅದಕ್ಕೇ ಪ್ರಥಮಸ್ಥಾನ ಸಂದಿದೆ:

ಮಲ್ಲಿಗೆಯಲ್ಲದೆ ಕೇದಗೆಯಲ್ಲದೆ ತೆಂಗಲ್ಲದೆ . . .
ಪಲಸಲ್ಲದೆ ಮಾವಲ್ಲದೆ ಗಿಡುಮರಗಳೆಂಬುವಿಲ್ಲಾ ನಾಡೊಳ್

(ತ್ರಿಷಷ್ಠಿ ಪುರಾತನ ವಿಲಾಸ: ೨೮-೭).

ನಮ್ಮ ಕಾವ್ಯಗಳಲ್ಲಿ "ಮಲ್ಲಿಗೆಯ ಮಾಮರನೇ ಪಲ್ಲವದಿಂ ತೋರ್ಪಶೋಕೆಯ ಮರನೇ ನಲ್ಲನ ಕಂಡಿರೇ ಪೇಟ್" ಎಂದು ಬೆಸಗೊಳ್ಳುವ ವಿರಹಿಣಿಯರಿಗೆ ಕೊರತೆಯಿಲ್ಲ (ಜೀವಸಂಭೋದನೆ: ೬-೪೦). "ಮಾಮರದಡಿಯ ಮಲ್ಲಿಕಾಮಂಟಪದ ತಳದ ತಣ್ಣೆಳಲ ರಮಣೀಯತೆ" ಕಾವ್ಯಗಳಲ್ಲಿ ಮೂಡಿ ನಮಗೆ ವೈನವಿರು ತರುತ್ತವೆ (ಸಿದ್ಧರಾಮಚಾರಿತ್ರ: ೨-೧೫). ವಿಲಾಸವತಿಯರ ಹೂಸಂಚಯನದ ಈ ಸಂಭ್ರಮವನ್ನು ನೋಡಿ:

ಅಲ್ಲಿ ಮಾಮರದಲ್ಲಿ ಮಲ್ಲಿಕಾಲತೆಯಲ್ಲಿ
ಎಳೆಯಸುಗೆಮರದಲ್ಲಿ ಜಳರುಹಾಕರದಲ್ಲಿ
ಸಂಪಗೆಯ ತರುಗಳೊಳ್ ಸೊಂಪಿಡಿದ ಸುರಯಿಯೊಳ್
ಹಾದರಿಯ ಮರದಲ್ಲಿ ಮಾಧವಿಯ ಲತೆಯಲ್ಲಿ
. . . ಪೂಗೊಯ್ಯಲೆಂದಬಲೆಯರ್ನೆರೆದು . . .

(ರಾಜಶೇಖರ ವಿಳಾಸ: ೧೦-೫೭ ರಗಳೆ)

ಮಲ್ಲಿಗೆ ತನ್ನ ಕೋಮಲತೆಗೆ ಹೆಸರಾಗಿದೆ. ಅದನ್ನು ಹೆಣ್ಣಿಗೆ ಹೋಲಿಸುವುದರ ಔಚಿತ್ಯವೇ ಇದು. "ಅಲ್ಲಿ ನವಮಲ್ಲಿಕಾ ಕುಸುಮಸುಕುಮಾರಿಯರ್ ನವಮಲ್ಲಿಕಾ ಲತೆಗಳುಮಂ . . . ನೋಡುತ್ತಂ ಕುಸುಮಾಪಚಯಕ್ರೀಡಾವಿಳಾಸದಿಂ ತೊಟಲ್ವಲ್ಲಿ" (ಆದಿಪುರಾಣ: ೧೧-೯೩) ಮೊದಲಾದ ವರ್ಣನೆಗಳಲ್ಲಿ ಮಲ್ಲಿಗೆ ತನ್ನ ಸ್ಥಾನವನ್ನು ಭದ್ರಪಡಿಸಿಕೊಂಡಿದೆ.

ನಾಡೊಡೆಯರು ಕೂಡ ಮಲ್ಲಿಗೆಯ ಅಭಿವೃದ್ಧಿಗೆ ಸಾಕಷ್ಟು ಗಮನ ಕೊಟ್ಟಿದ್ದಾರೆ. ಅವುಗಳ ಆರೈಕೆ ಮಾಡುವ ವನಮಹತ್ತರರಿಗೆ ಅವರು ಕಾಣಿಕೆ ನೀಡಿ ಆದರಿಸಿರುವುದೂ ಉಂಟು:

ಮಾವಿಂಗಿದು ಮಲ್ಲಿಗೆಗಿದು
ತಾವರೆಗೊಳಕಿದುದಲೆಂದು ಪೆಸರ್ವೆಸರಿಂ ಭೂ
ಪಾವಸನ ಕನಕಚಯಮನಿ
ಳಾವಲ್ಲಭನಿತ್ತನಾತನೆಡಟೋಡುವಿನಂ

(ಚಂದ್ರಪ್ರಭಪುರಾಣ: ೭-೫೧).

ಮಲ್ಲಿಗೆ ತನ್ನ ಸುವಾಸನೆಗೆ ಎಷ್ಟು ಪ್ರಸಿದ್ಧವಾಗಿದೆಯೆಂದರೆ ಮಲ್ಲಿಗೆಸುಗಂಧ ಮಿಶ್ರಿತ ಸುವಾಸನಾದ್ರವ್ಯಗಳಿಗೆ ಹೆಚ್ಚು ಬೇಡಿಕೆಯಿದೆ. ಉದಾಹರಣೆಗೆ ಮಲ್ಲಿಗೆ ಅಗರುಬತ್ತಿ, ಮಲ್ಲಿಗೆಪನ್ನೀರು, ಮಲ್ಲಿಗೆ ಸುಗಂಧದ್ರವ್ಯ ಇತ್ಯಾದಿ. ಶ್ರೀಗಂಧದ ಎಣ್ಣೆ ಯಂತೆಯೇ ಮಲ್ಲಿಗೆ ಎಣ್ಣೆ ತುಂಬಾ ಜನಪ್ರಿಯವಾದುದು. ಮಲ್ಲಿಗೆಕಂಪು ಎಷ್ಟು ಖ್ಯಾತವೆಂದರೆ, 'ಮಲ್ಲಿಕಾಮೋದ' ಎಂಬ ಬಿರುದನ್ನು ಅನೇಕರು ಹೆಮ್ಮೆಯಿಂದ ಹೇಳಿಕೊಂಡಿರುವುದನ್ನು ಕಾಣಬಹುದು: "ಗಣ್ಡರೊಳ್ಗಣ್ಡಂ ಗಣ್ಡಬಂಗಾಱಂ ತೇಜಮಾರ್ತ್ತಂಡಂ ಮಾರ್ಪ್ಪಡೆ ಭೀಮಂ ಮಲ್ಲಿಕಾಮೋದಂ ಕೀರ್ತಿವಿದ್ಯಾಧರಂ... ಜಗದೇಕಮಲ್ಲ ಶ್ರೀಮಜ್ಜಯಸಿಂಘದೇವರ್" (ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಶನ್ಸ್, XX, ೫೧-೮ ; ಕಾಲ ೧೧೧೯). "ಸತ್ಯಾಶ್ರಯ ಕುಳತಿಳಕಂ ಚಾಳುಕ್ಯಾಭರಣಂ ಮಲ್ಲಿಕಾಮೋದಂ ಮಾರ್ಪ್ಪಡೆಭೀಮಂ ರಾಯಗಜಕೇಸರಿ ಗಣ್ಡರೊಳ್ಗಣ್ಡಂ ಗಣ್ಡಬಂಗಾಱಂ . . . ಶ್ರೀ ಮಜ್ಜಗದೇಕಮಲ್ಲನಾಮಾದಿ ಸಮಸ್ತಪ್ರಶಸ್ತಿ ಸಹಿತಂ ಶ್ರೀ ಮಜ್ಜಯಸಿಂಹರ್ ಪೊಟ್ಟಳಕೆಱೆಯ ನೆಲೆವೀಡಿನೊಳ್ ಸುಖಸಂಕಥಾ ವಿನೋದದೊಳ್ ರಾಜ್ಯಂಗೆಯ್ಯುತ್ತುಂ (ಎಫಿಗ್ರಾಫಿಯ ಕರ್ಣಾಟಿಕಾ, VII, ಶಿಕಾರಿಪುರ : ೧೫೬-೬ ; ಕಾಲ ೧೦೩೦).

ಮಲ್ಲಿಗೆಯ ಮಹತ್ವವನ್ನು ಕುರಿತು ಸಕಾರಣವಾಗಿ ಎತ್ತಿ ಹಿಡಿದಿರುವ ನಿದರ್ಶನಗಳು ಕಾವ್ಯಲೋಕದಲ್ಲಿ ಅಪೂರ್ವವೇನಲ್ಲ. ಇಲ್ಲಿ ನೋಡಿ ಒಂದು ಪದ್ಯ: ಅದು 'ಗಾಳಿಗೆ ಗಂಧವಹನೆಂಬ ಹೆಸರು ಬರಲು, ಚೈತ್ರಮಾಸವು ಮಧುಮಾಸವೆನ್ನಿಸಿಕೊಳ್ಳಲು, ಮನ್ಮಥನಿಗೆ ಕುಸುಮಾಯುಧನೆಂಬ ಹೆಸರು ಅನ್ವರ್ಥವಾಗಲು ಮಲ್ಲಿಗೆಯೇ ಕಾರಣ' ಎಂದು ನಿರೂಪಿಸುತ್ತದೆ :

> ಅಸದಳಮಾದ ಮಲ್ಲಿಗೆಯ ಬಂಧುರಗಂಧಮನಾಂತು ತೆಂಕಣಿಂ
> ದೆಸಗುವ ಗಾಳಿ ಗಂಧವಹನಾದುದು ಮಾಗಿಯ ಪೋಗು ಕಾಟ್ಪುರಂ
> ಮಸಗುವ ಮಲ್ಲಿಕಾಮಧುವಿನಿಂ ಮಧುಮಾಸಮುಮಾಯ್ತು ಕೈದುವಂ
> ಪೊಸಯಿಸಿ ಮಲ್ಲಿಕಾ ಕುಸುಮದಿಂ ಕುಸುಮಾಯುಧನಾದನಂಗಜಂ
>
> (ಮಲ್ಲಿನಾಥ ಪುರಾಣ : ೬-೮೮).

ಔಷಧೀ ಗುಣ: ಸಕಲ ವೈದ್ಯಸಂಹಿತಸಾರಾರ್ಣವದ 'ಪುಷ್ಪಧಾರಣ ಪ್ರಶಂಸಾ ಪ್ರಕರಣ'ದಲ್ಲಿ (ಪು. ೪೩) ಮಲ್ಲಿಗೆಯ ಕೆಲವು ಅವಗುಣಗಳನ್ನು ಕುರಿತು ಹೇಳಿದೆ : "ಮಲ್ಲಿಗೆ ಹೂವನ್ನು ಧರಿಸುವುದರಿಂದ ಶರೀರಕ್ಕೆ ಉಷ್ಣವಾಗಿ, ಶ್ಲೇಷ್ಮ ನಾಶಕರವಾಗಿ ಕಣ್ಣುಗಳ ದೃಷ್ಟಿಯುನ್ನು ನಷ್ಟಮಾಡುವುದಾಗಿ, ಮತ್ತೆ ಮತ್ತೆ ಧರಿಸುವ ಮನಸ್ಸು ಹುಟ್ಟುವುದರಲ್ಲಿ ಪ್ರಸಕ್ತವಾಗಿ ಮಂಡೆಯ ಕೂದಲುಗಳಲ್ಲಿ ಹೇನು, ಸೀರು ಮುಂತಾದ್ದನ್ನು ಹೆಚ್ಚಿಸುವುದು." ಮಲ್ಲಿಗೆಗೆ ಕೆಲವು ವ್ಯಾಧಿಗಳನ್ನು ಗುಣಪಡಿಸುವ ಔಷಧೀ ಗುಣವಿದೆ. ಉದಾಹರಣೆಗೆ 'ವಿವಿಧ ವೈದ್ಯ ವಿಷಯಗಳು

ಎಂಬ ವೈದ್ಯಗ್ರಂಥದಲ್ಲಿ (ಪು. ೧೭೫) ಹೀಗಿದೆ: ಮೂಲವ್ಯಾಧಿಗೆ: ಅರಿದಳ, ಸಿತಿನಿ, ನೆಗ್ಗಿಲಹೂ, ಮಲ್ಲಿಗೆಹೂ . . . . ಮುಡಿವಾಳ—ಇವೆಲ್ಲ ಸಂಪಾದನೆ ಮಾಡಿ ಈ ಪುಷ್ಪವ ಗದ್ಯಾಣ ತೂಕವ ತೆಗೆದುಕೊಳ್ಳುವುದು.

ಮಲ್ಲಿಗೆ ಬಳ್ಳಿಗಳಲ್ಲಿ ಬೇಗ ಹೂಬಿಡಲು, ವಾಸನೆ ವರ್ಧಿಸಲು ಕೆಲವು ಉಪಾಯಗಳನ್ನು 'ಲೋಕೋಪಕಾರ'ದಲ್ಲಿ ಹೇಳಿದೆ:

ಪುಲ್ಲಂ ಸುಟ್ಟಿಳೆಯೊಳಗಾ
ಮಲ್ಲಿಗೆ ಗೊನೆಯಯ್ದುನಾಱನೂಱಲೊಡಂ ತ
ಳ್ವಿಲ್ಲದೆ ಕುಸುಮಿಸುಗುಂ ಸಲೆ
ಪಲ್ಲವಿಸುಗುಮದು ಸರಸ್ವತೀಮುಖತಿಳಕಾ (೬-೪೮)

(ಭೂಮಿಯಂ ಚೆನ್ನಾಗಿ ಅಗೆದು ಶೋಧಿಸಿ ಮೇಲೆ ಪುಲ್ಲಂ ಸುಟ್ಟು ಹರಗಿಸಿ ಆ ತಾವಿನಲ್ಲಿ ಮಲ್ಲಿಗೆ ಕೊನೆಗಳಂ ಅಯ್ದಾರನೊಂದಾಗಿ ನಡಲ್ ಆ ಬಳ್ಳಿಗಳ್ ಬೇಗಂ ಪೂವಪ್ಪುವು). ಹೂವುಗಳ ವಾಸನೆ ಹೆಚ್ಚಿಸಲು ಹೀಗೆ ಮಾಡಬೇಕು:

ಅಗರಾಂಬುಜಮೆನಿಸುವ ಗ
ಡ್ಡೆಗಳ ಕಷಾಯಮನೆ ಮೊದಲೊಳಱಿದೆಱಿದೊಡೆ ಮ
ಲ್ಲಿಗೆಗಂ ಜಾಜಿಗಮನ್ಯೋ
ನ್ಯಗಂಧ ಸಂಕ್ರಮಣಮಪ್ಪುದೊಂದಚ್ಚರಿಯೇ (೬-೪೯)

(ಅಗಿಲ್, ತಾಮರೆಗೆಡ್ಡೆ, ಇದಱ ಕುಸುಮಂ ಇವಂ ಕಷಾಯಮಂ ಮಾಡಿ ಆ ಕಷಾಯದ ನೀರಂ ಜಾಜಿಯ ಗಿಡು, ಮಲ್ಲಿಗೆಯ ಬಳ್ಳಿಗಳ ಮೊದಲಲ್ಲೆಱೆಯಲ್ ಆ ಗಿಡಗಳ ಹೂವುಗಳೊಂದಱ ವಾಸನೆವೊಂದಕ್ಕೆ ಹಿಡಿದು ಪರಿಮಳಂ ಪಲ್ಲಟಿಸುಗುಂ).

ಅದೇ ಗ್ರಂಥದಲ್ಲಿ ಮಲ್ಲಿಕಾ ತೈಲವನ್ನು ತಯಾರಿಸುವ ಕ್ರಮವನ್ನು ಹೀಗೆ ನಿರೂಪಿಸಲಾಗಿದೆ:

ಪ್ಲವಗ ಕುಷ್ಠ ಲವಂಗ ರೇಣುಕ ದೇವಿಕಾ ತ್ರುಟಿ ತೋಯಮುಂ
ಬಿವಱಿನಿಮ್ಮಡಿಕೌಂಗು ಮೂವಡಿ ಮಾಂಸಿ ವಕ್ರದಳಂಗಳಂ
ಬಿವಱೊಳೆಣ್ಣೆಯನಟ್ಟು ಕಾಯಿಸಿ (ವೇಧಿಸೆ) ಮಲ್ಲಿಕಾ ಕುಸುಮಂಗಳಂ
ಪ್ರವರಗಂಧಮೆನಿಪ್ಪ ಮಲ್ಲಿಗೆತೈಲಮಕ್ಕುಮದುತ್ತಮಂ (೭-೨೧)

(ನಸುಗುನ್ನಿ, ಕೋಷ್ಠಂ, ಲವಂಗದ ತಿಗುಡು, ನಾಯ್ಮೆಣಸು, ಸಹದೇವಿಗಿಡ, ಏಲಕ್ಕಿ, ಮುಡಿವಾಳಂ—ಇವೆಲ್ಲವಂ ಕೂಡಿ ಒಂದು ಭಾಗ ಇವಱೊಳಿಮ್ಮಡಿ ನೆಟಿಲಮರದ ತಿಗುಡು, ಮೂರು ಮಡಿ ಜಟಾಮಾಂಸಿ ತಗರಮೂಲ ಇವೆಲ್ಲಮಂ ಕೂಡಿ ಒಳ್ಳಿಹ ಎಣ್ಣೆಯೊಳ್ ಹಾಯ್ಕಿ ಇಳಿಸಿ ಆ ತೈಲಕ್ಕೆ ಪೊಸದಾಗಿರ್ಪ ಒಳ್ಳೆಯ ಮಲ್ಲಿಗೆ ಹೂವಿನ ವಾಸನೆಯಂ ಕುಡಲ್ ಆ ತೈಲಮುತ್ತಮಮಪ್ಪ ಮಲ್ಲಿಕಾತೈಲಮೆನಿಸಿಕೊಳ್ವುದು).

ಮಲ್ಲಿಕಾ ಮಾಲೆ: ಇದು ಮಲ್ಲಿಗೆಯ ಹೆಸರು ಹೊಂದಿದ ಒಂದು ವೃತ್ತದ ಹೆಸರು. ಸಾಮಾನ್ಯವಾಗಿ ಎಲ್ಲ ಚಂಪೂಕಾವ್ಯಗಳಲ್ಲೂ ಇದು ಬಳಕೆಯಾಗಿದೆ. ಶೃಂಗಾರ, ಕರುಣೆ ಮೊದಲಾದ ಮಲ್ಲಿಗೆಯಂತಹ ಮೃದುಭಾವನೆಗಳಿಗೆ ಒಪ್ಪುವ ವೃತ್ತವಾದ್ದರಿಂದ ಇದಕ್ಕೆ ಆ ಹೆಸರು ಅನ್ವರ್ಥವಾಗಿದೆ. ಈ ವೃತ್ತದ ಲಕ್ಷಣವನ್ನು ಕುರಿತು ಛಂದಶ್ಶಾಸ್ತ್ರದಲ್ಲಿ ಹೀಗೆ ಹೇಳಿದೆ:

'ಮಲ್ಲಿಕಾಮಾಲೆಯಪ್ಪುದು ರಂಸಜಂಜಭರಂಬರಲ್' (ಕನ್ನಡ ಕೈಪಿಡಿ : ೮೬)

ಜ್ವಾಲೆವಾಯುದಿನೇಶಯುಗ್ಮಶಶಾಂಕ ಪಾವಕವೆಂಬವರ್
ಲೀಲೆಯಿಂ ಬರೆ ವಿಶ್ರಮಂ ವಸುಸಂಖ್ಯೆಯೊಳ್ ನಿಲೆ ಭಾಮಿನೀ
ನೀಲಲೋಲ ಸಹಸ್ರಕುಂತಳೆ ಸಂದುದಿಂತಿದು ಮಲ್ಲಿಕಾ
ಮಾಲೆಯೆಂಬುದು ನಿಶ್ಚಯಂ ಕವಿರಾಜಹಂಸವಿನಿರ್ಮಿತಂ

(ಛಂದೋಂಬುಧಿ: ೧೯೪).

ಪೂಜೆಗೆ ಯೋಗ್ಯ: ಮಲ್ಲಿಗೆಹೂ ಹೆಣ್ಣಿನ ಶೃಂಗಾರಮುಡಿಯನ್ನು ಅಲಂಕರಿಸಿದಂತೆ ಭಗವಂತನ ಸಿರಿಮುಡಿಯನ್ನು ಏರಿ ಧನ್ಯವಾಗಿದೆ. ಸ್ತ್ರೀ ಸಮುದಾಯದ ಒಲವು ಗೆದ್ದ ಮಲ್ಲಿಗೆ, ಭಗವಂತನ ಕರುಣೆಯನ್ನೂ ಗಿಟ್ಟಿಸಿದೆ. ಎಲ್ಲ ದೇವ-ದೇವತೆಗಳನ್ನು ಸಂಪ್ರೀತಗೊಳಿಸಬಲ್ಲ ಸೌಂದರ್ಯ, ಸುಕೋಮಲತೆ, ಸುವಾಸನೆ ಇದಕ್ಕಿದೆ. ಮಲ್ಲಿಗೆಯರಳು, ಮಲ್ಲಿಗೆದಂಡೆ, ಮಲ್ಲಿಗೆ ಏಕಾವಳಿಗಳಿಂದ ದೇವರನ್ನು ಅಲಂಕರಿಸಿ ಪೂಜಿಸಿ ಧನ್ಯರಾದವರುಂಟು. ಗಿರಿಜಾ ಕಲ್ಯಾಣದ ಒಂದು ಪ್ರಸಂಗ: ಗಿರಿಜೆ ಶಿವನನ್ನು ಒಲಿಸಿಕೊಳ್ಳಲು ಪ್ರಯತ್ನಿಸುವ ಒಂದು ಸನ್ನಿವೇಶ. ಗಿರಿಜೆ ಮೊದಲು ಮಲ್ಲಿಗೆಯನ್ನು ಒಲಿಸಿಕೊಂಡು ಅನಂತರ ಶಿವನಾರಾಧನೆಗೆ ತೊಡಗಿದಳಂತೆ:

ಮಲ್ಲಿಗೆ ಶಿವನ ಜಡೆಮುಡಿ
ಯಲ್ಲಿಗೆ ಕೊಂಡೊಯ್ಯಲೆಂದು ಸಮ್ಮದದಿಂ ನಿ
ಮ್ಮಲ್ಲಿಗೆ ಬಂದೆಂ . . . . (ಗಿರಿಜಾ ಕಲ್ಯಾಣ : ೫-೬೩) ಎಂದು ಹೇಳಿ

ಮಹೇಶ್ವರಿ ಮಲ್ಲಿಗೆಯಲರ್ದೊಂಗಲನ್ನು ಕೊಯ್ದಳು; ಅಷ್ಟೇ ಅಲ್ಲ 'ಕುಸುಮಜಾತಿಯೊಳಗೆ ಜಾತಿ ನೀನು' ಎಂದು ಕೊಂಡಾಡಿದಳಂತೆ (ಗಿರಿಜಾ ಕಲ್ಯಾಣ : ೪-೬೨). ಶಿವನ ಪೂಜೆಗೆ ತೊಡಗಿದ ಗಿರಿಜೆಯು "ಮಲ್ಲಿಗೆಯ ನನೆಯ ಏಕಾವಳಿಯಂ ಮುತ್ತಿನ ಹಾರದೊಳೊಡಗೂಡಿ ಹಾಕಿದಳು" (ಗಿರಿಜಾ ಕಲ್ಯಾಣ : ೫-೭೫).

ಪೂಜೆಗೆ ಮಲ್ಲಿಗೆ ಹೂ ಶ್ರೇಷ್ಠವೆಂಬ ಭಾವನೆಯೂ ಇದೆ. "ಮಲ್ಲಿಗೆಯ ಮೊಲ್ಲೆಯ ಜಾಜಿಯ ಕಂಪನಾಳ್ವ ಭಾಸುರ ಕುಸುಮಂಗಳಂ ಕೊಟ್ಟು" (ಸಮಯ ಪರೀಕ್ಷೆ : ೮-೧೨); "ಸುರಗಿ ಸುರಹೊನ್ನೆಯಿರವಂತಿಗೆ ಜಾಜಿ ಮುಖ್ಯವಾದ

ಲತಾಂತೋತ್ಕರದಿಂ ಪೂಜಿಸಿ" (ಉದ್ಭಟಕಾವ್ಯ : ೩-೧೨೧) ಮೊದಲಾದ ಮಾತು ಗಳಲ್ಲಿ ಮಲ್ಲಿಗೆಯ ಪೂಜಾಯೋಗ್ಯತೆ ಸ್ಪಷ್ಟವಾಗಿದೆ.

ಹರಿಹರನ ಚಿತ್ರಣದಲ್ಲಂತೂ ಮಲ್ಲಿಗೆ ಜೀವಂತವಾಗಿದೆ. ಹೂವುಗಳೆಂದರೆ ಹರಿಹರನಿಗೆ ವಿಶೇಷ ಒಲವು. ಅಂತೆಯೇ ಹೂಗಳನ್ನೇ ಕುರಿತು 'ಪುಷ್ಪರಗಳೆ' ಎಂಬ ಕಾವ್ಯವನ್ನು ಅವನು ರಚಿಸಿದ್ದಾನೆ. 'ಅಳಿಯೆಱಗದನಿಲನಲುಗದ ರವಿಕರಂ ಪುಗದ, ಬೆಳಬೆಳೆದು ನಳನಳಿಸಿ ಮಘಮಘಿಸುವ . . . ಹೂಗಳನ್ನು ಕೊಯ್ದು ತರುವ', 'ನನೆಮುಗಳ ಕೊನೆಮುಗುಳ ಬಿರಿಮುಗುಳ ಅರಲ್ಗಳಂ ತನಿಗಂಪು ತೀವಿರ್ದ ಪೊಚ್ಚ ಪೂಗಳಂ ಕೊಯ್ವ' ಸಡಗರ, 'ಪರಿಮಳದ ಸುಗ್ಗಿ ಸೌರಭದ ಸಂದಣಿ ಎನಿಸುವ ಚಂದ ಚಂದದ ಕುಸುಮವೃಂದಮಂ ತಿರಿಯುವ' ಸಡಗರ ಭಕ್ತನಿಗೆ. ಅದಕ್ಕಿಂತ ಹೆಚ್ಚಿನ ಉತ್ಸಾಹ ಕಾವ್ಯ ಹೇಳುವ ಹರಿಹರನಿಗೆ!

ಮಲ್ಲಿಗೆಯ ಮುಂದಕ್ಕೆ ಮನವಾರೆ ನಡೆತಂದು ಸಲ್ಲೀಲೆವೆರ್ಚೆ<br>ಕಂಪಿನ ನಿಧಿಯಿರಲ್<br>ನಿಂದು ಹಸುರಳಿದು ಬೆಳ್ಪಳಿದು ನನೆದೋಱಿ ಹೊರೆದೋಱಿ<br>ಹೊಸಪಱಿಯ<br>ಬಿರಿಮುಗುಳ್ಗಳಿರೆ ಬೀಗಿ ನಲವೇಱಿ ಮಲ್ಲಿಗೆಯರಲ್ಗಳಂ<br>ಮನವಾರೆ ತಿಱಿವುತಂ . . . . (ಪುಷ್ಪರಗಳೆ : ೩೬)

ಪರಿಮಳವನೀವ ಮಲ್ಲಿಗೆಯರಲ್ಗಳಂ<br>ತನಿಗಂಪನೀವ ಮಲ್ಲಿಗೆ ಜಾಜಿಪೂಗಳಂ<br>ಭರದಿಂದ ತಂದು ಪೂಮಾಲೆಗಳನೆಸಗಿ<br>ಶಿವನ ಸಿರಿಮುಡಿಯೊಳಗೆ ಸುತ್ತಿ (ಲಿಂಗಾರ್ಚನೆಯ ರಗಳೆ : ೧)

ಹರಿಹರ ಶಿವಪೂಜೆಗೆ ಹೂಗಳನ್ನು ಬಳಸಿದ ಪರಿ ವಿಶಿಷ್ಟವಾಗಿದೆ: ಪನ್ನೀರಿನ ಸ್ನಾನ, ಪರಾಗದ ವಿಭೂತಿ, ಸಿರಿಮುಡಿಯ ಬಾಚಲು ಕೇದಗಿಯ ಬಾಚಣಿಗೆ, ಕೆಂಜೆಡೆಯನ್ನು ಅಲಂಕರಿಸುವುದು, "ಪರಿಮಳದ ಕತ್ತುರಿಗಂಪಿಕ್ಕಿ ಮಲ್ಲಿಗೆಯ ಪರಿಮಳದಪ್ಪಿಕ್ಕೆ, ಮೊಲ್ಲೆಯ ಮುಗುಳ್ಗಳಂ ಸಾರ್ಚಿ . . . . ಮಿಕ್ಕ ಪೂಗಳಂ ಮುಂದೆ ಪೂವಲಿಗೆದಱಿ" ಪೂಜಿಸಿದನು (ಪುಷ್ಪರಗಳೆ : ೪೦).

ಮಾಮರ–ಮಲ್ಲಿಗೆ : ಮಾವಿನ ಮರವನ್ನು ನೆಮ್ಮಿದ ಮಲ್ಲಿಗೆ ಬಳ್ಳಿ ಸಮಾಜ ದಲ್ಲಿ ಹೆಣ್ಣು ಗಂಡನ್ನು ಆಶ್ರಯಿಸಿ ಇರುವ ಸಂಕೇತವಾಗಿದೆ. ಕಾವ್ಯಲೋಕದಲ್ಲಿ ಇವು ದಂಪತಿ. ನಮ್ಮ ಕಾವ್ಯಗಳು ಈ ಪ್ರಿಯ–ಪ್ರೇಯಸಿಯರ ರಸಚಿತ್ರವನ್ನು ಹೃದಯಂಗಮವಾಗಿ ನೀಡಿವೆ. ಇವೆರಡರ ಸಂಬಂಧ ಎಷ್ಟು ಅನ್ಯೋನ್ಯ, ಎಷ್ಟೊಂದು ಮಧುರ! ಈ ಸಂಬಂಧ ಕಾವ್ಯಲೋಕದಲ್ಲಿ ಅತ್ಯಪೂರ್ವವೆನಿಸುವ ನೋಟಗಳನ್ನು

ಒದಗಿಸಿದೆ. ಶುಭ್ರವರ್ಣದ ನರುಗಂಪಿನ ಮಲ್ಲಿಗೆ, ಮಾಧುರ್ಯಕ್ಕೆ ಹೆಸರಾದ ಮಾಮರವನ್ನು ಆಶ್ರಯಿಸಿದ್ದು ಉಚಿತವಾಗಿಯೇ ಇದೆ. "ಚೂತಮನಪ್ಪಿ ಪುಷ್ಪಿತವಾದುದು ಮಲ್ಲಿಗೆ" ಎನ್ನುತ್ತಾನೆ ಹರಿಹರ (ಗಿರಿಜಾ ಕಲ್ಯಾಣ : ೪–೧೧೩). ಇಂಥ ಕಡೆಯಲ್ಲೆಲ್ಲಾ ಮಾಮರ ಒಂದು ಮರವಾಗಿ, ಮಲ್ಲಿಗೆ ಒಂದು ಬಳ್ಳಿಯಾಗಿ ಮಾತ್ರ ಉಳಿಯದೆ ಚೈತನ್ಯ ಸ್ವರೂಪಿಗಳೆಂಬ ಭಾವನೆಯಿಂದಲೇ ಪರಿಗಣಿಸಲ್ಪಟ್ಟಿವೆ. ಮಾಮರದ ವರ್ಣನೆಯಿದ್ದಲ್ಲೆಲ್ಲಾ ಮಲ್ಲಿಗೆ ಅವಿಭಾಜ್ಯವೆಂಬಂತೆ ಬಂದಿದೆ.

ಆಮ್ರದ ಶೋಭೆಗೆ ಮಲ್ಲಿಗೆ ಕಾರಣವೆನ್ನುತ್ತಾನೆ ಷಡಕ್ಷರದೇವ: 'ಮಲ್ಲಿಗೆಯ ಮುಕುಳಕುಳಮಿಡಿದೆಲ್ಲೆಡೆಯುಂ ತೋಱೆ' ಆದರ ಅಂದವೇ ಅಂದ (ರಾಜಶೇಖರ ವಿಳಾಸ : ೧೦–೫). ಆದಕ್ಕೆ ಕವಿ ಈ ಪ್ರಿಯ–ಪ್ರೇಯಸಿಯರನ್ನು "ಪ್ರಿಯದಿಂದಪ್ಪಿರ್ದ ಮಲ್ಲೀವಧುವತನುಸುಖಕ್ಕೊಲ್ದು ಮೈಯಿತ್ತು ಚೂತಪ್ರಿಯನಾಗಳ್....ಒಪ್ಪಿದುದು" (ರಾಜಶೇಖರ ವಿಳಾಸ : ೧೦–೩೩) ಎಂದಿದ್ದಾನೆ. ಅವುಗಳ ಸಂಬಂಧ ಎಷ್ಟು ಅನ್ಯೋನ್ಯವಾಗಿತ್ತು ಎಂಬುದಕ್ಕೆ ಷಡಕ್ಷರದೇವ ನೀಡಿರುವ ಈ ಚಿತ್ರ ನೋಡಿ: ಗಾಳಿ ಅಲುಗಾಡಿ ಪರಾಗವು ಮಾವಿನ ಹೂವೆಂಬ ಕಣ್ಣಿನಲ್ಲಿ ಬಿದ್ದಾಗ ಮಲ್ಲಿಗೆವೆಣ್ಣು ಬಂದು ಕಣ್ಣಲ್ಲಿ ಊದಿ ಆದನ್ನು ನಿವಾರಿಸುವಳೋ ಎಂಬಂತೆ ಶೋಭಿಸುತ್ತಿತ್ತು (ರಾಜಶೇಖರ ವಿಳಾಸ : ೧೦–೨೭).

ಮಾಮರ–ಮಲ್ಲಿಗೆಗಳ ಮದುವೆಯನ್ನು ಸ್ವತಃ ಮನ್ಮಥನೇ ನಿಂತು ಮಾಡಿಸಿದನಂತೆ! ಆದೂ ಹೀಗೆ:

> ಕಳಶಂ ಪದ್ಮಾಕರಂ ಕನ್ನಡಿ ಹಿಮರುಚಿ ಕಾಮಾಗ್ನಿ ಹೋಮಾಗ್ನಿ
> ಪುಂಸ್ಕೋ
> ಕಿಳ ನಾದಂ ವೇದಮಂತ್ರಂ ಕುಡಿ ಗುಡಿ ಮಧು ಮೌಹೂರ್ತಿಕಂ
> ಪೂತವಲ್ಲೀ
> ಕುಳಮೆಲ್ಲಂ ನಿಬ್ಬಣಂ ಬಂದಬಲೆಯರೆನೆ ಚೂತಂಗಮಾ
> ಮಲ್ಲಿಕಾ ಕೋ
> ಮಳೆಗಂ ಕೊಂಡಾಡಿ ಕೈನೀರೆಱೆದನತನು ಲಾವಣ್ಯ
> ಪುಣ್ಯಾಂಬುವಿಂದಂ (ಮಲ್ಲಿನಾಥಪುರಾಣ : ೬–೪೪).

ಅಂತೆಯೇ ಚೂತರಾಜನ ಮಹಾದೇವಿಯಾದ ಮಲ್ಲಿಕಾರಾಣಿಗೆ ಮಂಗಳವಾಗಲಿ ಎಂದು ಕವಿ ಉಗ್ಗಡಿಸುತ್ತಾನೆ:

> ಜನಸಮ್ಮೋಹನ ವಿದ್ಯೆ ತನ್ನ ಮಧುವಿಂ ಪುಟ್ಟಿತ್ತು ಪುಷ್ಪಂಗಳು
> ಳ್ಳನಿತುಂ ನೋಂತವೆ ತನ್ನ ಕೀಟಿಸಟಿ ಸೌಭಾಗ್ಯಕ್ಕೆನಿಪ್ಪಗ್ಗದೀ
> ವನದೇವೀ ಸಖಿಗೀ ವಸಂತ ವಿಜಯಶ್ರೀದೇವಿಗೀ ಚೂತರಾ
> ಜನ ಮಾದೇವಿಗೆ ಮಲ್ಲಿಕಾ ರಮಣಿಗಂ ಭದ್ರಂ ಶುಭಂ ಮಂಗಳಂ
> (ಮಲ್ಲಿನಾಥಪುರಾಣ : ೬–೫೧).

ಷಡಕ್ಷರ ಕವಿಯು ಸಹ ಮಾಮರ–ಮಲ್ಲಿಗೆಯರ ವಿವಾಹ ಸಂಭ್ರಮವನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾನೆ:

ಗಾಳಿಯೇ ಗಿಳಿದಾಳಿ (ಮಾಂಗಲ್ಯ), ಕೆಂಪಾದ ಚಿಗುರೇ ಕೆಂಪುವಸ್ತ್ರ, ಹಾರಾಡದೆ ಇರುವ ದುಂಬಿಗಳ ಸಾಲೇ ಇಂದ್ರನೀಲಮಣಿಮಾಲೆ, ಹೂಗಳ ಶರಾಗವೇ ಸುಗಂಧದ ಪುಡಿಯಾಗಿರಲು ಆ ಕಾಡಿನಲ್ಲಿ ಸಿಹಿಮಾವಿನಮರವೆಂಬ ಪುರುಷನು ಮಲ್ಲಿಗೆ ಬಳ್ಳಿಯೆಂಬ ಸ್ತ್ರೀಯಲ್ಲಿ ಮನಸಟ್ಟು ಪಾಣಿಗ್ರಹಣ ಮಾಡಿದನು (ರಾಜಶೇಖರ ವಿಳಾಸ: ೯–೫೪).

ಸಾತ್ವಿಕರಸವು ಮೈಮನವನ್ನೆಲ್ಲಾ ತುಂಬಿ, ರೋಮಾಂಚನಗೊಂಡು ಪ್ರೀತಿ ಪೂರ್ವಕವಾಗಿ ತಂದೆಯು ಅಳಿಯ–ಮಗಳಿಗೆ ಕೈನೀರೆರೆಯುವ ಭಂಗಿಯನ್ನು ಅಗ್ಗಳ ಹೀಗೆ ನಿರೂಪಿಸಿದ್ದಾನೆ:

> ಮುಗುಳಂ ಪೇೞಿದ ಕುಂದವಲ್ಲಿಗೆ ಮರಲ್ತಂದಾ ಕದಂಬೋದ್ಭಶಾ
> ಖಿಗಮಚ್ಛಾಂಬುವನಂಬುದಂ ಕೞೆವ ಪಾಂಗಿಂ ಸಾತ್ವಿಕಸ್ವೇದ ಬಿಂ
> ದುಗೆ ರೋಮೋದ್ಗತಿಗಿರ್ಕೆಯಾದ ಸುತೆಗಂ ಜಾಮಾತೃಗಂ
> ಪ್ರೀತಿ ಕೈ
> ಮಿಗೆ ಕೈನೀರೆೞೆದಂ . . . . (ಚಂದ್ರಪ್ರಭಪುರಾಣ: ೬–೭೧).

ಮಾಮರ ಹೂತಿದೆ. ಹಾಗೆ ಅದು ಹೂವು ಬಿಟ್ಟುದು ಮಲ್ಲಿಗೆಯನ್ನು ಒಲಿಸಲೆಂದೇ ಎನ್ನುತ್ತಾನೆ ನೇಮಿಚಂದ್ರ:

> ಮಲ್ಲಿಗೆಯನೊಲಿಸುವಳಿಪಿಂ
> ಮೆಲ್ಲಗೆ ಪೂವಾದುದೆನಿಸಿ ಮಾವಿನ ಕೊನರಿಂ
> ದಲ್ಲುಗುವ ಸೊನೆಯಿನೇಂ ಕಂ
> ಕೆಲ್ಲಿ ಕರಂ ನಾಂದು ನೆನೆದು ಮಗಮಗಿಸಿದುದೋ
> (ಲೀಲಾವತಿ ಪ್ರಬಂಧ: ೯–೧೧೦).

ಸ್ತ್ರೀಯರು ಮಾವಿನ ಪಾದವನ್ನು ಮಲ್ಲಿಗೆಯಿಂದ ಪೂಜಿಸುತ್ತಿದ್ದರು. ಅದಕ್ಕೆ ಕಾರಣವಿದೆ ಎನ್ನುತ್ತಾನೆ ಕವಿ ಜನ್ನ:

> ಕುಸುಮ ಶರಾಸನಕ್ಕೆ ನನೆಯಂಬಿನ ತೆಕ್ಕೆಗೆ ಮೀನಕೇತನ
> ಕ್ಕಸಮಶಿಳೀಮುಖಕ್ಕೆ ರತಿಗೇಳಿಗೆವೆಂದುಱೆ ನೋಡಿ ಮೆಚ್ಚಿ ಜೋ
> ಳಿಸಿ ಕರಪಲ್ಲವಂ ಬಿರುಗೆ ಬಾಯಿನ ಬಲ್ಲನೆ ಮೊಗ್ಗೆ ಜಾಗರಲ್
> ಪಸರಿಸೆ ಕೊಯ್ದು ಮಲ್ಲಿಗೆಯೊಳರ್ಚಿಸಿದಳ್ ಸಹಕಾರ ಪಾದಮಂ
> (ಅನಂತನಾಥಪುರಾಣ: ೭–೧೩).

ಮಾಮರ-ಮಲ್ಲಿಗೆಯರ ಆಲಿಂಗನದ ಸನ್ನಿವೇಶಗಳಿರುವ ಉದ್ಯಾನ, ಪ್ರಿಯ-ಪ್ರೇಯಸಿಯರ ಸಮಾಗಮವನ್ನು ನೆನಪಿಸುತ್ತದೆನ್ನುತ್ತಾನೆ, ಇನ್ನೊಬ್ಬ ಕವಿ:

ಮಾವು ಮಲ್ಲಿಗೆಯುಂ ಕರ
ಮಾವರಿಸಿದ ಕತದಿನೆಸೆವುದೀಕ್ಷಿಸುವರ ಕ
ಣ್ಗೀವುದ್ಯಾನಂ ಸರಸ ವಿ
ಟೀ ವಿಟಶಯ್ಯಾ ನಿವಾಸಮಂ ನೆನೆಯಿಸುತಂ

(ಶಬ್ದಾನುಶಾಸನ : ೩೮ ಉದಾ).

ಸಹಕಾರ ಮಹೀರುಹಕ್ಕೆ ಅಡರ್ದ ಬಳ್ಳಿಮಲ್ಲಿಗೆಯನ್ನು ನೋಡಿದಾಗ ಕವಿಗೆ ಅನ್ನಿಸಿತಂತೆ—ಈ ಮಲ್ಲಿಗೆವೆಣ್ಣು ತೋರುತ್ತಿರುವ ಬೆಡಗು ವಿಲಾಸ ವಿಭ್ರಮಗಳಲ್ಲಿನ ಪರಿಣತಿಯನ್ನು ನೋಡಿದರೆ ಈಕೆ ತಾಯ ಬಸಿರಲ್ಲಿರುವಾಗಲೇ ಇದನ್ನೆಲ್ಲಾ ಕಲಿತಿರಬೇಕು, ಎಂದು:

ಎಳಮಾವಂ ಪಲ್ಲವಗ್ರಾಹಿಯನನುನಯದಿಂ ಸುತ್ತಿ ತೆಂಗಾಳಿಯಿಂ ಸಂ
ಚಳನ ಪ್ರಾಗಲ್ಭ್ಯದೊಳ್ ವಾಸನೆವಡೆದು ಪರಿಷ್ವಂಗದೊಳ್ತಾಂಗಿ ಭೃಂಗಾ
ವಳಿಯಂ ಪೋಱಂ ದರಸ್ಮೇರದಿನೆಱಗಿಸಿ ವಲ್ಲೀಲತಾತನ್ವಿ ವೇಶ್ಯಾ
ಕಳೆಯೊಳ್ ಸೌಭಾಗ್ಯಶೋಭಾವತಿ ಪರಿಣತಿಯಂ ಗರ್ಭದೊಳ್ಕಲ್ತಳಕ್ಕುಂ

(ಮಲ್ಲಿನಾಥಪುರಾಣ : ೬-೩೯).

ಆದ್ದರಿಂದಲೇ 'ಮಲ್ಲಿಗೆ ಹೂವನ್ನು ಸೃಷ್ಟಿಸಿ ಜಡಜಜನಾದ ಬ್ರಹ್ಮ ತನ್ನ ಜಡತ್ವವನ್ನು ಮೀರಿದನು' ಎಂದು ಹೇಳಿರುವ ಕವಿಯ ಹೇಳಿಕೆ (ಮಲ್ಲಿನಾಥಪುರಾಣ: ೬-೪೩) ಸಮರ್ಥನೀಯ.

ಹೀಗೆ ಮಾವು-ಮಲ್ಲಿಗೆಗಳ ಪರಸ್ಪರಾವಲಂಬನದ ಈ ರಸಚಿತ್ರ ಗಂಡು-ಹೆಣ್ಣಿನ ಮಧುರಬಾಂಧವ್ಯದ ಸಂಕೇತವಾಗಿದೆ. ಅಂತೆಯೇ ಕವಿ ನಾಗಚಂದ್ರನ ಉದ್ಗಾರದೊಂದಿಗೆ ನಾವೂ ದನಿಗೂಡಿಸಬೇಕಾಗಿದೆ "ಪೊಸಮಲ್ಲಿಗೆಗಕ್ಕೆ ಮಂಗಳಂ" (ಮಲ್ಲಿನಾಥಪುರಾಣ : ೬-೪೬).

ಮಲ್ಲಿಗೆ-ದುಂಬಿ : ದುಂಬಿಗೆ ಮಲ್ಲಿಗೆಯ ಕಂಪಿನಾಸೆ, ಆದರ ಮಧುವಿನ ಮೇಲೆ ಇದರ ಮನಸ್ಸು. ಅದಕ್ಕೇ ದುಂಬಿಯನ್ನು 'ಬಂಡುಣಿಗ, ಅಲರುಣಿಗ' ಎಂದು ಕರೆಯುವರು. ಅದು ಹೂಗಳನ್ನು ಕಂಡು ಝೇಂಕರಿಸುತ್ತ ಸುತ್ತಾಡಿ, ಒಲೆದಾಡಿ ಹೂವಿನ ಧೂಳಿನಲ್ಲಿ ನಲಿದಾಡಿ, ಮಧುವನ್ನು ಕುಡಿಯುವ ದೃಶ್ಯವು ಕವಿಗೆ ವಿಟಪುರುಷನನ್ನು ನೆನಪಿಗೆ ತರುತ್ತದೆ. ಅದಕ್ಕೇ ದುಂಬಿಯನ್ನು ವಿಟನೆಂದೇ

ಸಂಬೋಧಿಸಿರುವುದೂ ಉಂಟು. ಮಲ್ಲಿಗೆಯಲ್ಲಿ ಸಿಕ್ಕುವ ಕುಸುಮ ರಸ ದುಂಬಿಯ ಕೊರಲುದ್ದವೂ ಇತ್ತು :

ತುಂಬಿಗೆ ಕೊರಲುದ್ದಂ ಬಂ
ಡೆಂಬಿನಿತಱೊಳಿರ್ದುದಲ್ತು ಬಿರಯಿಗುಗುಟ್ಟೀ
ರೆಂಬಿನಿತಾದುದು ದೆಸೆಯಂ
ತುಂಬಿದ ಮಗಮಗಿಪ ಮಲ್ಲಿಕಾ ಕುಸುಮರಸಂ (ಕಾವ್ಯಸಾರ : ೭೨೧).

ಹೂವರಳಿದರೆ ದುಂಬಿಗೆ ಹಬ್ಬ. ಸಂಭ್ರಮಗೂಡಿ ಅದರ ಸುತ್ತ ಹಾರಿ ಹಾರಿ ಮೊರೆಯುತ್ತದೆ. "ಬೆಳ್ಪುಗೂಡಿದುದು ಮಲ್ಲಿಗೆ ತುಂಬಿಯ ಸಂತೆ ಸಂಭ್ರಮಂ ನಿಲೆ ನೆರೆದಿತ್ತು" (ಮಲ್ಲಿನಾಥಪುರಾಣ : ೫-೨೪). ಮಲ್ಲಿಗೆ-ದುಂಬಿಗಳ ಸಮಾಗಮ ತೀರ ಸ್ವಾಭಾವಿಕ. ವನದಲ್ಲಿ ಎತ್ತ ನೋಡಿದರೂ ಆ ದೃಶ್ಯ ಕಣ್ಣಿಗೆ ಕಾಣುತ್ತದೆ. "ಮಲ್ಲಿಗೆಯ ತುಂಬಿಯ ಕೂಟಮೆ ನೋಟಮಾದ ನಂದನಲಕ್ಷ್ಮಿ ಕಣ್ಗೆಸೆದು ತನ್ನನೆ ನೋಡಿಸಿದಳ್" (ಶಾಂತಿಪುರಾಣ : ೭-೧೦).

ಒಂದೊಂದು ವಸ್ತು ಒಂದೊಂದಕ್ಕೆ ಪ್ರಿಯ. ಕೋಗಿಲೆಗೆ ಮಾವಿನ ಚಿಗುರು, ಗಿಳಿಗೆ ಹಣ್ಣು, ದುಂಬಿಗೆ ಮಲ್ಲಿಗೆ ಹೂ : "ಮಲ್ಲಿಗೆಯೊಳ್ ಮದಾಳಿ ಫಳದೊಳ್ ಗಿಳಿ ಕೋಗಿಲೆ ಕೆಂದಳಿರ್ಗಳೊಳ್" (ಕಾವ್ಯಸಾರ (ಮಲ್ಲಣ): ೧೦-೩೦); "ಮಲ್ಲಿಗೆಯಲ್ಲಿ ತುಂಬಿ ಮೊರೆಯುತಿದೆ ಕಂಪಿನೊಳೊಂದಿ" (ಕಬ್ಬಿಗರ ಕಾವ : ೬೩).

ಮದಾಳಿ ಮಲ್ಲಿಗೆಯ ಸೌರಭವನ್ನು ಹೀರುವ ದೃಶ್ಯ ಇದು :

ಸುರಭಿ ಸಮೀರ್ರಂ ಬೆರಸು ಬೇಗದೆ ಬಂದಲರ್ಗಣ್ಣ ಸನ್ನೆಯಿಂ
ಕರೆಯೆ ವಸಂತದೂತಿ ಸಹಕಾರನ ಕೈವಿಡಿದಿರ್ದ ಮಲ್ಲಿಕಾ
ಪರವಧುವಂ ವಿನೀಳ ಪರಿಧಾನಮನಾಕೆ ಮಧುಪ್ರಸಂಗ ಕಾ
ತರೆ ಮುಸುಕಿಟ್ಟವೋಲ್ ಮುಸುಱಿ ಪೀರ್ದವು ಸೌರಭಮಂ ಮದಾಳಿಗಳ್
(ಮಲ್ಲಿನಾಥಪುರಾಣ : ೬-೪೧).

ದುಂಬಿಗೆ ಮಲ್ಲಿಗೆ ಎಷ್ಟು ಪ್ರಿಯವೋ ಸಂಪಗೆ ಅಷ್ಟೇ ಅಪ್ರಿಯ. ದುಂಬಿ ಒಮ್ಮೆ ಜಾರನಂತೆ ಸಂಪಗೆ ಬಳಿ ಹೋಗಿ ಶತ್ರುವಿನ ಮನೆಗೆ ತಪ್ಪಿಹೋಗಿ ಓಡಿಬರು ವಂತೆ ಬಂದುದನ್ನು ಕಂಡ ಮಲ್ಲಿಗೆ ನಗುತ್ತಿತ್ತಂತೆ :

ಬಗೆಯದೆ ನಡೆವಳಿಗರಸಂ
ಪಗೆಯರ ಮನೆಗೆಯ್ದಿ ಬಳಿಕ ಜಾಱುವವೊಲ್ ಸಂ
ಪಗೆಯ ನನೆಗೆಯ್ದಿ ಬಳಿಕೊ
ಯ್ಯಗೆ ಜಾಱುವ ತುಂಬಿ ನಗಿಸಿದುದು ಮಲ್ಲಿಗೆಯಂ
(ಕಬ್ಬಿಗರ ಕಾವ : ೫೮).

ಬಂಡನುಂಡು ದುಂಬಿವಿಂಡು ಹಾಡುತ್ತಾ ಹಾರುವಾಗ ಅವು ಮಲ್ಲಿಕಾಲಲನೆಯ ಕಟಾಕ್ಷ ಕಾಂತಿಯಂತೆ ಮಿನುಗಿದವು ಎನ್ನುತ್ತಾನೆ ಕವಿ ಅಗ್ಗಳ :

ಬಳಸಿರ್ದ ವಿಟಪಿವಿಟಸಂ
ಕುಳಮಂ ಚೆಲ್ಲದೊಳೆ ನೋಟ್ಪ ಮಲ್ಲಿಕಾಲತಿಕಾ
ಲಳನೆಯ ಕಟಾಕ್ಷರುಚಿಯೆನೆ
ಮಿಳಿರ್ವುವು ಬಂಡುಂಡು ಪಾಱುವಳಿಮಾಳಿಕೆಗಳ್

(ಚಂದ್ರಪ್ರಭ ಪುರಾಣ : ೭–೫೧).

ದುಂಬಿಯಾಟ ಒಂದು ಬಗೆಯ ಲೀಲೆಯಾಗಿ, ಕ್ರೀಡೆಯಾಗಿ ಕಾಣಿಸುತ್ತದೆ :

ಮಲ್ಲಿಕಾಲತೆಗಳೊಳ್ಮಂಡಳಿಸಿ ಕೊನೆದಾಡಿ
ಸಲ್ಲಲಿತಮಾದ ಪರಿಮಳಡೆಸಕದೊಳ್ಮಾಡಿ

(ಉದ್ಭಟಕಾವ್ಯ : ೧೦–೧೨೦).

ಈ ದುಂಬಿಯಾಟ ಮಾಲೆಕಾರ್ತಿಯರಿಗೆ ಕಾಟವಾಗಿ ಪರಿಣಮಿಸುತ್ತದೆ. ಹೂಕಟ್ಟುವ ಹೂವಾಡಗಿತ್ತಿಯರನ್ನು ಅಂಜಿಸುವಷ್ಟು ಪ್ರಖರ ದುಂಬಿಗಳ ಝೇಂಕಾರ :

"ಮಲ್ಲಿಗೆಯಲರ್ದಂಡೆವಿಡಿಯೆ ಬಂದೆಱಗುವ ಜಿಲ್ಲಿದುಂಬಿಗೆ ಬೆರ್ಚಿ ನಿಂದ ಪೂಮಾಲೆಗಾರ್ತಿಯರ" ಚಿತ್ರ 'ಮೋಹನತರಂಗಿಣಿ'ಯಲ್ಲಿ (೩–೧೭) ಸೊಗಸಾಗಿ ಮೂಡಿದೆ.

ದುಂಬಿಯ ಮೊರೆತಕ್ಕೆ, ಝೇಂಕಾರಕ್ಕೆ ನಮ್ಮ ಕವಿಗಳು ವಿಶೇಷ ಪ್ರಾಶಸ್ತ್ಯ ವನ್ನು ಕೊಟ್ಟಿದ್ದಾರೆ. ಮಧುಮತ್ತ ಮಧುವ್ರತ ಸ್ವರವು ಹೊಮ್ಮಿದ ವರ್ಣನೆ ಇದು :

ಕಾಡಿನ ಹೂಗಳಲ್ಲಿನ ದುಂಬಿನಾದ ವನಲಕ್ಷ್ಮಿಯ ನೂಪುರಧ್ವನಿಯಾದರೆ, ಮಲ್ಲಿಗೆಯಲ್ಲಿನ ದುಂಬಿಯ ಝೇಂಕಾರ ಮನ್ಮಥನ ಬಿಲ್ಲಿನ ಧ್ವನಿಯಂತಿತ್ತು :

ಸರಸವಿಲಾಸ ಪುಷ್ಪಚಯದೊಳ್ ವನಲಕ್ಷ್ಮಿಯ ರತ್ನನೂಪುರ
ಸ್ವರಮೆನೆ ಹೇಮತಾಮರಸದೊಳ್ ಜಳದೇವಿಯ ರತ್ನಕೂಜಿತ
ಸ್ವರಮೆನೆ ಮಲ್ಲಿಕಾ ಮುಕುಳದೊಳ್ ರತಿಕಾಂತನ ಬಾಣ ಭೀಂಕೃತೆ
ಸ್ವರಮೆನೆ ಪೊಣ್ಮಿದತ್ತು ಮಧುರಂ ಮಧುಮತ್ತ ಮಧುವ್ರತಸ್ವನಂ

(ಜಗನ್ನಾಥ ವಿಜಯ : ೪–೧೦೩).

ದುಂಬಿ ಒಂದು ರೀತಿಯಲ್ಲಿ ಮಲ್ಲಿಗೆಯ ಮುಖವಾಣಿ. ದುಂಬಿಯ ಝೇಂಕಾರವು ಮಲ್ಲಿಗೆಯ ಮಧುರವಾಣಿಯೆಂದೇ ಕವಿಯ ಅನಿಸಿಕೆ : "ಮಧುಪಾವಳೀ ನಿನದಮೆಂಬ ಕಳಧ್ವನಿಯಿಂದೆ ಮಲ್ಲಿಕಾ ಲಲನೆ ಕಡಂಗಿ ಪಾಡಿದಪಳ್" (ಜಗನ್ನಾಥವಿಜಯ: ೧೪–೨೩). ಮಾತು ಬರದ ಮಲ್ಲಿಗೆಯ ಮಧುರಭಾವನೆಗಳನ್ನು ಅಷ್ಟೇ ಮಧುರವಾಗಿ

ದುಂಬಿಗಳು ವ್ಯಕ್ತಪಡಿಸುತ್ತವೆ ಎಂದು ಒಬ್ಬ ಕವಿ ಸಾಧಿಸಿದರೆ, ಇನ್ನೊಬ್ಬ ಕವಿ ದುಂಬಿಗೆ ಝೇಂಕಾರಸ್ವರವನ್ನು ಒದಗಿಸಿದ್ದೇ ಮಲ್ಲಿಗೆ ಎನ್ನುತ್ತಾನೆ. ಈ ಹೇಳಿಕೆಯು ಮಾವಿನ ಚಿಗುರಿನ ರಸ ಕೋಗಿಲೆಯ ಕಂಠವನ್ನು ಹದಗೊಳಿಸಿ ಸುಸ್ವರವನ್ನು ಒದಗಿಸುತ್ತದೆ ಎಂಬ ಕವಿಯ ಹೇಳಿಕೆಯನ್ನು ನೆನಪಿಗೆ ತರುತ್ತದೆ :

ಕೋಗಿಲೆಗಾಯ್ತು ಮಾವಿನೊಳುದೊಂಗಲಿಸಿಂ ದನಿ ತುಂಬಿಗಾಯ್ತು ಮೇ
ಲಾಗಿರೆ ಬಂದ ಮಲ್ಲಿಗೆಯ ಸೌರಭದಿಂ ದನಿ ದೇವಸಾಲೆ ತಾಂ
ಕೋಗಿಲೆ ಬಂದು ಬಿನ್ನವಿಸಲೆದ್ದುದು ಮಾವು ತಳಿರ್ತ ಭಂಗಿಯಂ
ರಾಗಿಪ ತುಂಬಿ ಬಿನ್ನವಿಸವೇಟ್ಟುದು ಮಲ್ಲಿಗೆ ಪೂತ ಭಂಗಿಯಂ

(ಸೂಕ್ತಿ ಸುಧಾರ್ಣವ : ೧೧–೬).

ಮಾಮರಕ್ಕೆ ಮಲ್ಲಿಗೆ ಬಳ್ಳಿ ಹಬ್ಬಿದೆ. ಮಲ್ಲಿಗೆ ಮೈತುಂಬ ಹೂವರಳಿಸಿಕೊಂಡಿದೆ. ದುಂಬಿಗಳ ಹಿಂಡು ಮುತ್ತಿಗೆ ಹಾಕಿವೆ. ದುಂಬಿ ಮಧುವನ್ನು ಹೀರಿ ಮದವೇರಿ ಝೇಂಕರಿಸುತ್ತಿವೆ. ಈ ಝೇಂಕಾರವನ್ನು ಕೇಳಿದ ಕವಿಗೆ ಆ ದನಿಯಲ್ಲಿ ಹೊಸ ಅರ್ಥ ಸ್ಫುರಿಸುತ್ತದೆ. ದುಂಬಿಗಳು ಮಾಮರಕ್ಕೆ ಮಲ್ಲಿಗೆಯ ಬಗ್ಗೆ ಹೀಗೆ ಹೇಳುತ್ತವೆ ಎನ್ನುತ್ತಾನೆ ನೇಮಿಚಂದ್ರ :

ಪಸರಿಸಿ ಚೂತ ಕಟ್ಟು ದುಡಿಯಂ ಪೊಸಮಲ್ಲಿಗೆಗಾಯ್ತು ನೂತನ
ಪ್ರಸವ ವಿಭೂತಿ ನಿನ್ನರಸಿಗೆಂದು ಪೇಟ್ಟುವೊಲ್ ಅಳಿಕಾಂತೆ

(ಲೀಲಾವತಿ ಪ್ರಬಂಧ : ೪–೧೦೩).

ಅರಳಿದ ಮಲ್ಲಿಗೆಯಲ್ಲಿ ದುಂಬಿ ಮೊರೆಯುತ್ತಿರುವ ದೃಶ್ಯವನ್ನು ನೋಡಿದ ವಿರಹಿ ಯುವತಿಗೆ ತನ್ನನ್ನು ಅಗಲಿ ದೂರವಲ್ಲಿದ್ದ ಗಂಡನ ನೆನಹಾಯಿತಂತೆ :

'ಮಲ್ಲಿಗೆಯಲ್ಲಿ ಕಂಪಿನೊಳೊಂದಿ ತುಂಬಿ ಮೊರೆಯುತ್ತಿದೆ . . . .
ಬಂದುದು ಸುಗ್ಗಿ,
ನೆನ್ನ ನಲ್ಲನಿನ್ನು ಬಾರದೆ ತಡೆದನಲ್ಲ' ಎಂದು ಹರೆಯದ ಹೆಣ್ಣೊಬ್ಬಳು
ಕಣ್ಣೀರು ಮಿಡಿದಳು (ಕಬ್ಬಿಗರ ಕಾವ : ೬೩).

ಮಧುಕರನಾದ ದುಂಬಿ ಮಲ್ಲಿಗೆಯಲ್ಲಿ ಎಲ್ಲ ಋತುಗಳಿಗೂ ಬೇಕಾಗುವಷ್ಟು ಪರಿಮಳವನ್ನು ಸೆರೆಯಾಗಿಟ್ಟದೆಯಂತೆ :

ಪೆಱಗಣ ಮುಂತಣ ಋತುಗಳ
ತೆಱೆಯಂ ನಿಶ್ಚಯಿಸಿ ಮಧುಕರಂ ಮಧುಕರಮಂ
ತೆಱಲಾಱದೆ ಮಲ್ಲಿಗೆಯೊಳ್
ಸೆಱೆಗೆಯ್ದಂತಿರ್ದುದೊಂದು ಪರಿಮಳಫಲಮಂ

(ಅಜಿತನಾಥಪುರಾಣ : ೬–೧೮).

ಅದಕ್ಕೇ "ಉಪವನಕೆ ನಿಚ್ಚವಯಣಂ ಬರುವ ದುಂಬಿ ಉಪ್ಪಯಣಂಗೆಯ್ದುವಂದು ಪೊಸಮಲ್ಲಿಗೆಯೊಳ್" (ಅಜಿತನಾಥಪುರಾಣ: ೬-೨೦) ಎನ್ನುತ್ತಾನೆ ರನ್ನ.

ಮಲ್ಲಿಗೆ-ಗಾಳಿ: ಮಲ್ಲಿಗೆ ತನ್ನ ಸುಗಂಧಕ್ಕೆ ಹೆಸರು ಪಡೆದಿದೆ. ಮಲ್ಲಿಗೆ ಕಂಪಿನ ಕಣಿ. ಈ ಕಾರಣದಿಂದಲೇ ಅದಕ್ಕೆ ಕುಸುಮಕುಲದ ರಾಣಿಪಟ್ಟ ಸಿಕ್ಕಿದೆ. ಸಂಪಗೆಯ ಸೌರಭ, ಕೇತಕಿಯ ವಾಸನೆಗಳಂತೆಯೆ ಮಲ್ಲಿಗೆಗಂಪು ಪ್ರಸಿದ್ಧವಾಗಿದೆ. "ಇದುವೆ ಮಲ್ಲಿಗೆಗಂಪು ಜಾತಿಗಳ ಗಂಧಮಿದು" (ಚೆನ್ನಬಸವಪುರಾಣ: ೧೦-೩). "ಮಂದಾರ ಜಾಜಿ ಮಲ್ಲಿಗೆಯ ಮಂದಸೌರಭ್ಯ" ಬಹಳ ಅಪ್ಯಾಯಮಾನ (ಮೋಹನ ತರಂಗಿಣಿ: ೨೧-೧೨). ಅದರದು ಬರೀ ಕಂಪಲ್ಲ, ತನಿಗಂಪು: "ಮಾಮರನಲ್ಲದಿಲ್ಲ, ತನಿಗಂಪಿನ ಮಲ್ಲಿಗೆಯಲ್ಲದಿಲ್ಲ" (ಶಬ್ದಮಣಿದರ್ಪಣ: ೬೪ ಪ್ರಯೋಗ). ಗಾಳಿಗೆ 'ಗಂಧವಹ' ಎಂಬುದು ಸಾರ್ಥಕ ಹೆಸರು. ಗಾಳಿಗೆ ಈ ಹೆಸರು ಬಂದುದು ಅದು ಮಲ್ಲಿಗೆಯ ಕಂಪನ್ನು ಹೊತ್ತು ಸಾಗಿಸುವ ಮಣಿಹವನ್ನು ಕೈಗೊಂಡದ್ದರಿಂದಲೇ! "ಅಸದಳಮಾದ ಮಲ್ಲಿಗೆಯ ಬಂಧುರ ಗಂಧಮನಾಂತು ತೆಂಕಣಿಂದೆಸಗುವ ಗಾಳಿ ಗಂಧವಹನಾದುದು" (ಮಲ್ಲಿನಾಥಪುರಾಣ: ೬-೪೮).

ಮಲ್ಲಿಗೆಗೆ ಮನ ಸೆಳೆಯುವ ಇಂಥ ಸುಮಧುರ ವಾಸನೆ ಹೇಗೆ ಬಂತು? ಆಶ್ಚರ್ಯವೇ. ನಿಸರ್ಗದ ಇಂಥ ಸುಮಧುರ ಕೊಡುಗೆಯ ಬಗ್ಗೆ ಅಕ್ಕಮಹಾದೇವಿ ಹೀಗೆ ಬೆರಗು ವ್ಯಕ್ತಪಡಿಸಿದ್ದಾಳೆ: "ಮರುಗ ಮಲ್ಲಿಗೆ ಪಚ್ಚೆಗೆ ಪರಿಮಳದ ಉದಕವ ನೆಱೆದವರಾರಯ್ಯ" (ಮಹಾದೇವಿಯಕ್ಕನ ವಚನಗಳು: ೧). ಇಂಥ ಸುವಾಸನೆ ಕಾರಣವಾಗಿಯೆ, ಮನ್ಮಥ ಈ ಕಮ್ಮಿತ್ತಾದ ಹೂವನ್ನು ತನ್ನ ಪಂಚಬಾಣಗಳಲ್ಲಿ ಒಂದಾಗಿ ಮಾಡಿಕೊಂಡಿದ್ದಾನೆ (ಮೋಹನತರಂಗಿಣಿ: ೨೪-೬೩).

ಸುವಾಸನೆ ಹೊತ್ತು ಸುಳಿಯುವ ಗಾಳಿಯನ್ನು ವಿಟನೆನ್ನುತ್ತಾನೆ ಕವಿ. 'ಸಮೀರ ಸದ್ವಿಟನಂತೆ' ಸುಳಿದನಂತೆ. ಮಾಮರಕ್ಕೆ ರೋಮಾಂಚನವನ್ನು ತಂದಂತೆಯೇ ಮಲ್ಲಿಗೆಯನ್ನು ಅರಳಿಸಿದನೆನ್ನುತ್ತಾನೆ, ಷಡಕ್ಷರಿ. "ನಗಿಸುತ್ತಂ ಮಲ್ಲಿಕಾಕಾಮಿನಿಯನಳಿರವವ್ಯಾಜದಿಂ ಸೋಂಕಿ" (ರಾಜಶೇಖರವಿಳಾಸ: ೯-೪೬). ವಸಂತದೂತಿ ಸಹಾ ಈ ಗಂಧವಹನೊಡನೆಯೇ ಹೊರಡುವುದು: "ಸುರಭಿ ಸಮೀರಂ ಬೆರಸು ಬಂದಲರ್ಗಣ್ಣಸನ್ನೆಯಿಂ ಕರೆಯೆ ವಸಂತದೂತಿ ಸಹಕಾರನ ಕೈವಿಡಿದಿರ್ದ ಮಲ್ಲಿಕಾ ಪರವಧುವಂ (ಮಲ್ಲಿನಾಥ ಪುರಾಣ: ೬-೪೧).

ಮಲ್ಲಿಗೆಯದು ಉತ್ಕೃಷ್ಟ ಸುಗಂಧದ್ರವ್ಯ. ತಂಪು ಹಾಗೂ ಕಂಪಿಗಾಗಿ ಇದನ್ನು ಬಳಸುತ್ತಾರೆ: "ಪೂಸಿದರು ಮಲಯಜ ಯಕ್ಷಕರ್ದಮ ಮೊಲ್ಲೆ ಮಲ್ಲಿಗೆಯ" (ಕುಮಾರವ್ಯಾಸ ಭಾರತ, ಆದಿಪರ್ವ; ೩೨-೩೫). ಅದರ ಪರಿಮಳ ಎಷ್ಟು ಸೌಮ್ಯವೋ ಅಷ್ಟೇ ಆಹ್ಲಾದಕರ; ಮೈಮನಗಳನ್ನು ಜುಮ್ಮೆದಟ್ಟಿಸುವ ಪರಿ. ಅದರ ಸುಗಂಧವೇ ಅದನ್ನು ಮುಡಿಹಕ್ಕೆ ಯೋಗ್ಯವನ್ನಾಗಿ ಮಾಡಿದ್ದು. ರಸಿಕ

ಜನ ಅದನ್ನು ಬಳಸಿದ್ದೇ ಬಳಸಿದ್ದು. ಮಲ್ಲಿಗೆಯರಳನ್ನು ಹಾಸಿಗೆಗೆ ಬಳಸುವ ರಸಿಕರೂ ಉಂಟು: "ಮಲ್ಲಿಗೆಯರಳುವಾಸಿನ ಮಂಚಕೆ ಕರಪಲ್ಲವವ ಪಿಡಿದೆಳೆದು" (ಕಂಠೀರವ ನರಸರಾಜ ವಿಜಯ: ೯-೧೪೯). "ಮಲ್ಲಿಗೆಯ ಬಾಸಿಗದ ಮೇಗೆ ಮೆಯ್ಯನಿಕ್ಕುತೆ" (ಹರಿವಂಶಾಭ್ಯುದಯ: ೬-೩೪ ವ). ಮಲ್ಲಿಗೆ ಹೂಚೆಂಡನ್ನು ಎಸೆದಾಡುವ ರಸಿಕರು, ಮಲ್ಲಿಗೆಯರಳನ್ನು ಪ್ರೀತಿಯ ಕುರುಹಾಗಿ ನೀಡುವ ಸಹೃದಯರೂ ಉಂಟು: "ಸನ್ನೆಯ ಮಾಡುವರ್ತಿಯೊಳು ಮಲ್ಲಿಗೆಯರಳ ಕಸ್ತೂರಿಯೊಳದ್ದಿ ಕೈತುಂಬಿ ಕೊಡಲು" (ಕಂಠೀರವ ನರಸರಾಜವಿಜಯ: ೨-೮೪).

ಆದರೆ ಮಲ್ಲಿಗೆ ಯೋಗಿ ಹಾಗೂ ವಿಯೋಗಿಗಳಿಗೆ ಗಂಡಾಂತರ ಪ್ರಾಯ. ಏಕೆಂದರೆ ಅದು ಇಂದ್ರಿಯಗಳನ್ನು ಕೆರಳಿಸುತ್ತದೆ. "ಮಲ್ಲಿಗೆಗಳ್ ಬಸಂತದೊಳ್ ಬಿರಿದೊಡೆ ನಲ್ಲರಂ ನೆನೆವ ನಲ್ಲರ ಮೆಲ್ಲೆರ್ದೆಗಳ್ ಬಸಂತದೊಳ್ ಬಿರಿದುವದೆಂತೊ ಮಲ್ಲಿಗೆಗೆ ನಲ್ಲರ ಮೆಲ್ಲೆರ್ದೆ ವೇಳೆಗೊಂಡುದೋ" (ಪಂಪಭಾರತ: ೫-೩೩).

ಹೂ ಸಮುದಾಯಕ್ಕೆ ಮಲ್ಲಿಗೆ ರಾಣಿ. ಅದರ ಅಂದ-ಚಂದ, ಕಂಪು-ಸೊಂಪು ಅದಕ್ಕೆ ದೊಡ್ಡ ಪಟ್ಟವನ್ನು ದೊರಕಿಸಿವೆ: "ಅಪರಿಮಿತ ಪರಿಮಳಾತಿಶಯಿತ ಸರ್ವರ್ತು ಸಂಭವ ಪ್ರಸವಪ್ರಸರಕ್ಕೆ ಲತಾಂತಾಭಿರಾಜ ಮಲ್ಲಿಕಾ ವಿದಲನ್ಮುಕುಳ ನಿಕರದುಗುಳ್ವ ಹೊಸಕಂಪು ದೆಸೆದೆಸೆಗೆ ಪಸರಿಸಿ ಮಗಮಗಿಸೆ ಕಂಪಿನ ಕಣಿಯೆನಿಸಿದುದ್ಯಾನೈಕದೇಶ ದೊಳು ಸೊಗಯಿಸೆ—

ಕುಸುಮಕುಳಕ್ಕೆ ನಿನ್ನರಸೆ ನಿನ್ನವಿಳಾಸಮೆ ನಿನ್ನ ಚೆಲ್ವೆ ನಿ
ನ್ನೆಸಕಮೆ ನಿನ್ನಸಲ್ಗೆ ಮಧುಲಕ್ಷ್ಮಿಯೊಳಾ ಮಳಯಾನಿಳೇಂದುಗಳ್
ಪೊಸಯಿಸೆ ನಿನ್ನ ಸೌರಭಮನೆಂದಭಿಷೇಕ ಪುರಸ್ಸರಂ ಸ್ಮರಂ
ನಸು ಬಿರಿದಿರ್ದ ಮಲ್ಲಿಗೆಗೆ ಕಟ್ಟಿದನಂದಕದ ರಾಜ್ಯಪಟ್ಟಮಂ

(ಶಾಂತಿಪುರಾಣ: ೭-೧೮೨).

ಕುಸುಮಕುಲದ ಪಟ್ಟಕ್ಕೆ ಮಲ್ಲಿಗೆ ಅರ್ಹವಾಗಲು ಕಾರಣ ಅದರ ಗಂಧ, ಹೊಸ ಕಂಪು ಎನ್ನುವುದನ್ನು ಪೊನ್ನ ಹೀಗೆ ಮನವರಿಕೆ ಮಾಡಿದ್ದಾನೆ.

ಮಲ್ಲಿಗೆ-ಮನ್ಮಥ: ಮನ್ಮಥನಾಟಕ್ಕೆ ಮಲ್ಲಿಗೆಯ ಕೊಡುಗೆಯೇನು ಕಡಿಮೆಯಲ್ಲ. ಮಲ್ಲಿಗೆ ಬಿರಿದಾಗ ಉಂಟಾಗುವ ಕಾಮನಬ್ಬರವನ್ನು ಕವಿ ಹೀಗೆ ವಿವರಿಸಿದ್ದಾನೆ:

ಮುಳಿಡುಱಿದೋಪರಳ್ಕೆರ್ದೆ ಮುಗುಳ್ತಿರಿವಂತೆ ಮುಗುಳ್ತು ನಾಣಜಾ
ಣೊಳಗು ಸಡಿಲ್ವಿನಿಂ ಪೊಱಿಸಡಿಲ್ದು ಕಡಂಪು ಬೆಳರ್ತುಬಾಡೆ ಪೊ
ಟ್ಟಳಿಸಿ ಬೆಳರ್ತು ಮುದ್ರಿಸಿದ ಬಾಯ್ಗಳಲ್ಬಿರಿವಂತೆ ಕಂಪು ಕೈ
ಕೊಳೆ ಬಿರಿದತ್ತು ತುಂಬಿ ನೆರೆವಲ್ಲಿಗೆ ಮಲ್ಲಿಗೆ ಸಂತೆಯಂತೆವೋಲ್

(ಕಾವ್ಯಸಾರ: ೭೫).

ಮಲ್ಲಿಗೆ ದಂಡೆ ಕಟ್ಟುವ ಮಾಲೆಗಾರ್ತಿ ಬರೀ ಹೂ ಕಟ್ಟುತ್ತಿಲ್ಲ ; ಮನ್ಮಥನ ಬಾಣಕ್ಕೆ ಗರಿಗಟ್ಟುತ್ತಿದ್ದಾಳೆನ್ನುತ್ತಾನೆ ಕವಿ ಆಚಣ್ಣ : "ಗಱಿಗಟ್ಟುವುದತನುಗೆ ನನೆಗಟ್ಟುವ ನೆವದೆ ಪುಷ್ಪಲಾವೀನಿವಹಂ" (ವರ್ಧಮಾನಪುರಾಣ : ೧-೬೩).

'ಮಲ್ಲಿಗೆ ತನ್ನ ಸೌರಭದಿಂದ ಮನಸ್ಸನ್ನು ವಿಕಾರಗೊಳಿಸಿ ಕಾಮಿಯನ್ನು ಕೊಂದೇ ಬಿಡುತ್ತದೆ' ಎನ್ನುತ್ತಾನೆ ಕವಿ ನೇಮಿಚಂದ್ರ : "ಮಲ್ಲಿಗೆಯಲ್ಲಿ ಪೂತಲತೆಯಲ್ಲಿ . . . ಬಸಂತವಲ್ಲಿಯೆನೆ ಕೊಲ್ಲದೆ ಕಾಮಿಯನಾವನಂ ವನಂ" (ಲೀಲಾವತಿ : ೧೧-೨). ಮನ್ಮಥನಿಗೆ ಈ ಹೂವಿನ ಮೇಲೆ ಎಷ್ಟು ಆಸೆಯೆಂದರೆ ಅದನ್ನು ತನ್ನ ಪಂಚಬಾಣಗಳಲ್ಲಿ ಒಂದಾಗಿ ಸೇರಿಸಿಕೊಂಡಿದ್ದಾನೆ. ಅವನ ಪಂಚಾಸ್ತ್ರಗಳಿವು: "ಅಶೋಕ, ಅರವಿಂಡ, ಚೂತ, ಮಲ್ಲಿಗೆ, ನೈದಿಲೆ ಎಂಬ ಕುಸುಮಾಸ್ತ್ರ" (ವಿವೇಕ ಚಿಂತಾಮಣಿ : ೨೩೦). "ಮಾಂದಳಿರಸುಗೆ ಮಲ್ಲಿಗೆ ಪದ್ಮಿನಿಯರವಿಂದ ಕಳಿರ್ವ ಧೂಟಿಯರು ಕಂದರ್ಪದೇವನ ಕಮ್ಮಲರ್ಗೋಲುಗಳೆಂದವ ತಿಱಿದಿಕ್ಕಿದರು" (ಮೋಹನತರಂಗಿಣಿ; ೨೪-೬೩). ಅಷ್ಟು ಮಾತ್ರವಲ್ಲ ; ಅವನು 'ಕುಸುಮಾಯುಧ' ನೆನಿಸಿಕೊಂಡದ್ದು ಮಲ್ಲಿಗೆಯಿಂದಲೇ ಎನ್ನುತ್ತಾನೆ ಇನ್ನೊಬ್ಬ ಕವಿ : "ಕೈದುವಂ ಪೊಸಯಿಸಿ ಮಲ್ಲಿಕಾಕುಸುಮದಿಂ ಕುಸುಮಾಯುಧನಾದನಂಗಜಂ' (ಮಲ್ಲಿನಾಥ ಪುರಾಣ : ೬-೪೮). ಮಲ್ಲಿಗೆ ಅವನಿಗೆ ಪ್ರಿಯವಾದ ಬಾಣವಾದ್ದರಿಂದಲೇ ಮನ್ಮಥ 'ಮಲ್ಲಿಗೆಗೋಲ' (ಮೋಹನತರಂಗಿಣಿ : ೧೨-೨೯), 'ಮಲ್ಲಿಗೆ ಬಾಣ' (ನವಮೋಹನತರಂಗಿಣಿ : ೧೪-೧೮) ಎಂವೇ ಕರೆಸಿಕೊಂಡಿದ್ದಾನೆ. ಮನ್ಮಥನು ಪಂಚಬಾಣಗಳಲ್ಲಿ ಒಂದಾಗಿ ಮಲ್ಲಿಗೆಯನ್ನು ಆದರಿಸಿರುವುದಿರಲಿ, ಐದೂಬಾಣ ಗಳನ್ನು ಒದಗಿಸಿದ್ದು ಮಲ್ಲಿಗೆಯೊಂದೇ ಎಂದು ಸಾಧಿಸಿದ್ದಾನೆ ನಾಗಚಂದ್ರ ಕವಿ:

> ಮುರಿದ ತೊಡಂಬೆಯೊಳ್ಪೊನಸಿ ತೋರ್ಪ ಪಸುರ್ಸನೆ ಮೇಗೆ ಬೀಗಿ ಬೆ
> ಳ್ಕರಿಸಿದ ಮೊಗ್ಗೆ ಕೂಡೆ ಬಿಳಿದಾದ ಮುಗುಳ್ಪೊಱವೋದ ಕುಟ್ಮಲಂ
> ಬಿರಿದಲರೆಂಬಿವಂ ತಿಱಿದು ಮಲ್ಲಿಗೆಯೊಳ್ ಶರಪಂಚಕಂಗಳಂ
> ವಿರಚಿಸಿ ಪಂಚಬಾಣವೆಸರಂ ಪಡೆದಂ ಮದನಂ ಬಸಂತದೊಳ್

(ಮಲ್ಲಿನಾಥಪುರಾಣ : ೬-೪೭).

ಅದಕ್ಕೇ ಮಲ್ಲಿಗೆಯೆಂದರೆ ಮದನನಿಗೆ ಪರಮಪ್ರೀತಿ. ವನದ ಗಿಡಮರಬಳ್ಳಿಗಳ ಕುಶಲ ವನ್ನು ಕೇಳುವಾಗ ಮಲ್ಲಿಗೆಯನ್ನು ಹೀಗೆ ಆದರದಿಂದ ನೋಡಿದ್ದಾನೆ : "ಬಂದಿರೆ ಮಾಮರಂಗಳಿರ, ಮಲ್ಲಿಗೆ ಬಂದಿರ, ಕೋಕಿಲಾಳಿವೃಂದವೆ ಬನ್ನಿಮಿತ್ತ . . . ಕುಶಲವೆ ನಿಮಗೆಂದು ಮಧು ಪ್ರದೇಶದೊಳ್ ಬಂದು ಮನೋಜನೇವನಿತುಮಂ

ಬೆಸಗೊಂಡನೋ ಕೂಡಿಕೊಂಡನೋ" (ಅಜಿತನಾಥಪುರಾಣ : ೬-೧೪). ಮನ್ಮಥ ನಿಗೆ ಮಲ್ಲಿಗೆಬಾಣವನ್ನು ಕಂಡರೆ ಅಪರಿಮಿತ ವಿಶ್ವಾಸ :

ಮಲ್ಲಿಗೆಯಂಬೇವುವು ಗಿರಿ
ಮಲ್ಲಿಗೆಯಂಬುಳ್ಳೊಡೆನಗೆ ಬೆಳ್ಗರ್ಬಿನ ಮೆ
ಲ್ಬಿಲ್ಲೇವುದೊಗೆದ ಕಾಮನ
ಬಿಲ್ಲುಳ್ಳೊಡೆನುತ್ತೆ ಕಂತು ಮುಯ್ಯಾಂತಿರ್ಪಂ

(ಚಂದ್ರಪ್ರಭ ಪುರಾಣ : ೪-೪೫).

'ಶಿವನನ್ನು ಸೋಲಿಸಲು ಒಂದು ಬಿರಿದ ಮಲ್ಲಿಗೆಯೇ ಸಾಕು' ಎಂದು ಆಂಡಯ್ಯನ ಮನ್ಮಥ ಘೋಷಿಸಿದ್ದಾನೆ (ಕಬ್ಬಿಗರ ಕಾವ : ೧೯೨). ಮನ್ಮಥ ತನ್ನ ಯುದ್ಧಕ್ಕೆ ಚಂದ್ರ, ಕೋಗಿಲೆಗಳನ್ನು ಆಹ್ವಾನಿಸಿದಂತೆ ಮಲ್ಲಿಗೆಯನ್ನೂ ಕರೆದಿದ್ದಾನೆ: "ಆ ಸಸಿಯು ಕೋಗಿಲೆಯ . . . ಮಲ್ಲಿಗೆಯ ಕೈಬೀಸಿದನು ಕುಸುಮಾಸ್ತ್ರನೀ ಕೀಚಕನ ಕಗ್ಗೊಲಿಗೆ" (ಕುಮಾರವ್ಯಾಸ ಭಾರತ, ವಿರಾಟಪರ್ವ : ೨-೫೬).

ಮನ್ಮಥನ ಅಭಿಷೇಕ ಮಲ್ಲಿಗೆ ಮೊಗ್ಗುಗಳೆಂಬ ಮುತ್ತಿನ ಕಲಶದಿಂದ :

ಸಕಳೋರ್ವೀತಳ ಸಾಮ್ರಾ
ಜ್ಯ ಕಂಠಿಕಾಬಂಧ ಬಂಧು ಬಂಧುರಮಲ್ಲೀ
ಮುಕುಳ ಮಣಿಕಳಶಗಂಧೋ
ದಕದಿಂದಾದುದು ಮನೋಭವಂಗಭಿಷೇಕಂ

(ಮಲ್ಲಿನಾಥ ಪುರಾಣ : ೬-೪೯).

ಮೋಹುರವು ಮನ್ಮಥನ ಛತ್ರಿಯಾದರೆ, ಅದನ್ನು ಆವರಿಸಿದ ಮಲ್ಲಿಗೆ ಬಳ್ಳಿ ಅದಕ್ಕೆ ತನ್ನ ಮೊಗ್ಗುಗಳೆಂಬ ಮುತ್ತನ್ನು ಒದಗಿಸಿ ಮುತ್ತಿನ ಸತ್ತಿಗೆಯಾಗಿಸಿದೆ :

ಮಲ್ಲಿಗೆಯ ಮುಕುಳಕುಳ ಮಿಡಿ
ದೆಲ್ಲೆಡೆಯೊಳ್ ತೋಱಿ ಮಿಳಿರ್ದು ಬಳಸಿರೆ ವಿಳಸ
ತ್ಪಲ್ಲವತತಿ ಮೆಱೆದುದು ರತಿ
ವಲ್ಲಭ ಮುಕ್ತಾತಪತ್ರಮೆನೆ ತರುಣಾಮ್ರಂ

(ರಾಜಶೇಖರ ವಿಳಾಸ : ೧೦-೨೧).

ಅಂತೆಯೇ ಮನ್ಮಥ ಮಲ್ಲಿಗೆಯನ್ನು ಮನದುಂಬಿ ಹೊಗಳಿದ್ದಾನೆ :

ಮುಗುಟ್ದಿಂ ಮುಗುಟ್ದಾ ಪೊಸಮ
ಲ್ಲಿಗೆಯುರಲಂ ಸಿರಿಯ ದೇಸೆಯಂ ಕಂದರ್ಪಂ
ಪೊಗಟ್ದಿಂ ರತಿಗಂ ತಂಗಾ
ಳಿಗಮಳಿಗಂ ಗಿಳಿಗಮಿಂದುಗಂ ಕೋಗಿಲೆಗಂ

(ಸೂಕ್ತಿಸುಧಾರ್ಣವ : ೧೦-೮೨).

ಮನ್ಮಥನು ಮಲ್ಲಿಗೆಯನ್ನು ಆದರಿಸಲು ಇರುವ ಕಾರಣಗಳನ್ನು ಷಡಕ್ಷರಿ ಹೀಗೆ ಊಹಿಸಿದ್ದಾನೆ :

ಮಲ್ಲಿಗೆ ಮಾಮರಂ ಮಧು ಮಧುವ್ರತಮೌರ್ವಿ ಮನೋಜ್ಞಮಾದರಲ್
ವಿಲ್ಲಲರಂಬು ತೆಂಬೆಲರರಲ್ದ ನವಾಂಬುಜಮಂಚೆಕೊಂಚೆ ಕಂ
ಕೆಲ್ಲಿ ಶುಕಂ ಪಿಕಂ ಶಶಿಯೆನಿಪ್ಪವರಂಗದ ಪಂಗದೇಕೆನು
ತ್ತಲ್ಲಿ ಜಗಜ್ಜಯಾರ್ಥಮವರಂಗಮನಂಗಜನೊಲ್ದು ಸೇವಿಪಂ

ಮಲ್ಲಿಗೆ ಹೂ, ಮಾವಿನಮರ, ವಸಂತ, ದುಂಬಿಗಳ ಹೆದೆ, ಮನೋಜ್ಞವಾದ ಪುಷ್ಪಚಾಪ, ಪುಷ್ಪಬಾಣ, ತಂಗಾಳಿ, ಅರಳಿದ ನೂತನಕಮಲ, ಹಂಸಪಕ್ಷಿ, ಕ್ರೌಂಚಪಕ್ಷಿ, ಅಶೋಕ, ಗಿಳಿ, ಕೋಗಿಲೆ, ಚಂದ್ರ ಮುಂತಾದವುಗಳ ಸೌಂದರ್ಯದ ಹಂಗಾದರೂ ಜಗತ್ತನ್ನು ಜಯಿಸಲು ಏಕೆ ಬೇಕು ಎನ್ನುತ್ತ, ಅವರ ದೇಹಗಳನ್ನೇ ಮನ್ಮಥನು ಪ್ರೀತಿಯಿಂದ ಸೇವಿಸುತ್ತಿರುವನು (ರಾಜಶೇಖರ ವಿಳಾಸ : ೧೨-೫೧).

ಮಲ್ಲಿಗೆ-ಹೆಣ್ಣು : ಮಲ್ಲಿಗೆ ಹೆಣ್ಣಿನ ಚೆಲುವನ್ನು ವರ್ಧಿಸುವ ಸಾಧನ. ಆಕೆಯ ಪ್ರಸಾಧನಗಳಲ್ಲಿ ಮಲ್ಲಿಗೆಗೆ ಅಗ್ರಸ್ಥಾನ. ಸ್ತ್ರೀಯರಿಗೆ ಮಲ್ಲಿಗೆ ಹೂವೆಂದರೆ ತುಂಬಾ ಇಷ್ಟ. ಹೂರಾಶಿಯಲ್ಲಿ ಮೊದಲು ಆಕೆಯ ಪ್ರೀತಿಗೆ ಪಾತ್ರವಾದುದು ಇದೇ. ಅದನ್ನು ಮುಡಿದು ಆನಂದಿಸುವ ಭೋಗಿ ಆಕೆ. ಹೆಂಗಸರು "ಪೊಂಗೇದಗೆ ಮಲ್ಲಿಗೆಯೆಂಬ ಪಲವು ಪೂಮಾಲೆಗಳಂ ಮುಡಿದು" ಆನಂದಿಸುತ್ತಾರೆ. (ಆದಿಪುರಾಣ: ೫-೩೬). ಕನ್ನಡ ಕಾವ್ಯಗಳಲ್ಲಿ ಮಲ್ಲಿಗೆದುರುಬಿನ ಬೆಡಗಿಯರ ಬಣ್ಣನೆ ಯಥೇಚ್ಛವಾಗಿದೆ: "ಮಲ್ಲಿಗೆಯ ಚೆನ್ನದುರುಂಬು" (ಲೀಲಾವತಿ ಪ್ರಬಂಧ : ೧೧-೨), "ಮಲ್ಲಿಗೆದುರುಬಿನ ಬೆಡಗಿ" (ಅಬ್ಬಲೂರು ಚರಿತ್ರೆ: ೩-೧೧೩), "ಮಲ್ಲಿಕಾ ಕುಟ್ಮಳ ವ್ಯಕ್ತನವೋದ್ಯದ್ಧಾರಮಂ ಕಾಮಿನಿ ತಳೆದಿನಿಸುಂ ನೋಡೆ ಕಣ್ಗೆಡ್ಡಮಾದಳ್" (ಶೃಂಗಾರ ರತ್ನಾಕರ : ೧-೩೭). ಮಲ್ಲಿಗೆದಂಡೆ ಹೆಣ್ಣಿನ ಮುಡಿಗೆ ಒಳ್ಳೆಯ ಅಲಂಕಾರ. ಮಲ್ಲಿಗೆ ಮೊಗ್ಗಿನ ಜಡೆಯಂತೂ ನಯನ ಮನೋಹರ. ಅದೊಂದು ಅಪೂರ್ವವಾದ ಕಲೆ. ಮದುಮಗಳಿಗೆ ಇಂಥ ಅಲಂಕಾರ ಈಗ ಸರ್ವೇ ಸಾಮಾನ್ಯವಾಗಿದೆ. "ಮಿಸುಗುವ ತೋರಮಲ್ಲಿಗೆಯ ಜೋಲ್ದ ಬಳಲ್ಮುಡಿಯನ್ನು" (ಸುಕುಮಾರ ಚರಿತ್ರೆ : ೯-೧೧೪) ಕವಿಗಳು ಹೊಗಳಿದ್ದು ಹೊಗಳಿದ್ದೇ. ಇದು ಒಬ್ಬ ಹೆಣ್ಣಿನ ತುರುಬಿನ ಶೃಂಗಾರ : "ಮಲ್ಲಿಗೆಯರಳ ಮಾಲೆಗಳಿಂದ ವೇಣೀವಲ್ಲರಿ ತುಡುಕೆ ಹಿಮ್ಮುಡಿಯ . ಸಲ್ಲಲಿತಾಂಗಿ . . . ಸಿಂಗರಗೈದಳು" (ಕಂಠೀರವ ನರಸರಾಜ ವಿಜಯ : ೯ ೭೭). "ಆ ಸುದೇಷ್ಣಾದೇವಿಯರ ನಿಡುಕೇಶವನು ಹಿಕ್ಕುವಳು ಮುಡಿದವಲಿ ಮೊಸೆಮಲ್ಲಿಗೆಯರಳ ಚೆಕ್ಕಾಳವನು ಮುಡಿಸುವಳು" (ಕುಮಾರವ್ಯಾಸ ಭಾರತ, ವಿರಾಟಪರ್ವ : ೧-೩೩). 'ಐಗಳಿಗೆ ಪ್ರೀತಿ ಗೋಧಿಹುಗ್ಗಿ, ನಮ್ಮಾಕೆಗೆ

ಪ್ರೀತಿ ಮಲ್ಲಿಗೆ ಮೊಗ್ಗಿ' ಎಂಬುದೊಂದು ಗಾದೆ. ಉತ್ತರ ಕರ್ನಾಟಕದ ಕಡೆ ರೂಢಿಯಲ್ಲಿರುವ ಇದು ಕೂಡ ಹೆಣ್ಣು-ಮಲ್ಲಿಗೆಯ ಸಂಬಂಧವನ್ನೇ ಸೂಚಿಸುತ್ತದೆ.

ಗಂಡಸರು ಕೂಡ ಮಲ್ಲಿಗೆಯನ್ನು ಮುಡಿವ ಭೋಗಿಗಳಾಗಿದ್ದರು :

ಮುಗಿಮುಗಿಸುವ ಪೊಸಮಲ್ಲಿಗೆಯರಳಿನ
ಸೊಗಸುವೆತ್ತಿಸೆವ ಪೂಸರವ
ಮಿಗೆ ಶಿಖೆಗವುರಿಸಿ ದೂವಟ ರುಮ್ಮಾಲ
ಬಿಗಿದಳವಡಿಸಿದನಾಗ (ಕಂಠೀರವ ನರಸರಾಜ ವಿಜಯ: ೧೦-೧೮).

ಮಲ್ಲಿಗೆ ಹೂ ಬರೀ ತುರುಬಿನ ಅಲಂಕಾರಕ್ಕಷ್ಟೇ ಅಲ್ಲ ; ಅವು ಸರ್ವಾಂಗಭೂಷಣವಾಗಬಲ್ಲವು. ಇಲ್ಲಿದೆ ಅಂಥ ಅಲಂಕಾರಗಳ ಪಟ್ಟಿ ; ಹೂವಿನಸಂತೆಯಲ್ಲಿ ಮೆರೆಯುವ ಆಭರಣಗಳು ಇವು :

ಮಲ್ಲಿಗೆಯೋರ್ಚರಂ ಮಿಸುಪ ಮೊಲ್ಲೆಯ ಮೊಗ್ಗೆಯ ಪಿಂಡುಗಂಕಣಂ
ಪಲ್ಲವದಿಂಬುವೆತ್ತ ಪದಕಂ ಸುರಹೊನ್ನೆಯ ಕಂಠಮಾಲೆ ಕಂ
ಕೆಲ್ಲಿಯ ಕರ್ಣಪೂರಮದಿರ್ಮುತ್ತಿನ ಭಾವುರಿ ಚಾರುಚಂಪಕೋ
ತ್ಪಲ್ಲದ ನೇವುರಂ ಮೆಱೆವ ಪೂವಿನ ಸಂತೆ ಕರಂ ಮನೋಹರಂ
(ಶೃಂಗಾರ ರತ್ನಾಕರ : ೧-೪೦).

ಹೆಣ್ಣಿನ ಹೂವಿನ ಬಯಕೆಯನ್ನು ಈಡೇರಿಸಿದ ಬಗೆ ಇಲ್ಲಿದೆ :

ಎಳಸಿರೆ ಕಾಂತೆ ಪೊಚ್ಚಪೊಸ
ಮಲ್ಲಿಗೆಯಂ ಪಲವಂ ತುಱುಂಬಿ
ಕಣ್ಗೊಳಿ ಸಿರಿಗಂಧದಣ್ಪನೊಸೆದಿಕ್ಕಿ . . . ಪಾಡಿದಳ್
(ಶೃಂಗಾರ ರತ್ನಾಕರ : ೧-೪೦).

ಹೆಣ್ಣಿನ ಅಂಗೋಪಾಂಗಗಳಿಗೆ ಪುಷ್ಪಸಮುದಾಯವನ್ನು ಹೋಲಿಸುವುದು ಕವಿಸಂಪ್ರದಾಯ. ಕುಮುದ ಅಕ್ಷಿ, ಚಂಪಕ ನಾಸಿಕ, ಕೇತಕಿ ಉಗುರು, ಅಂತೆಯೇ ಕುಂದ ದಂತದೊಡನೆ ಸ್ಪರ್ಧಿಸುವಂತಿದ್ದವು (ಚೆನ್ನಬಸವಪುರಾಣ : ೯-೪೬). ಹೆಣ್ಣಿನ ಕಾಂತಿಯುಕ್ತ, ಶುಭ್ರಹಲ್ಲುಗಳನ್ನು ಮಲ್ಲಿಗೆ ಮೊಗ್ಗುಗಳಿಗೂ ಅವಳ ಮಂದಹಾಸವನ್ನು ಮಲ್ಲಿಗೆಯ ಶುಭ್ರವರ್ಣಕ್ಕೂ ಹೋಲಿಸುವುದು ಸರ್ವೇಸಾಮಾನ್ಯ. 'ಕುಂದಕುಟ್ಮಲರದನೆ' ಎಂಬುದು ಕ್ಲೀಷೆ ಎನ್ನುವಷ್ಟು ಬಳಕೆಯಾಗಿದೆ. ರುದ್ರಭಟ್ಟನ ಅನಿಸಿಕೆ ಹೀಗಿದೆ :

ಮಲ್ಲಿಗೆಯಂ ನಗೆಯಿಂ ಕರ
ಪಲ್ಲವದಿಂದರುಣ ಸರಸಿರುಹಮಂ ರದನದೆ
ಮೊಲ್ಲೆಯ ಮುಗುಳಂ ತೋರ್ಪರ್
ಸಲ್ಲಲಿತಾಂಗದ ಲತಾಂಗಿಯರ್ ಮಾನಿನಿಯರ್
(ಜಗನ್ನಾಥ ವಿಜಯ : ೨-೨೮).

ಮಲ್ಲಿಗೆ ಮೊಗ್ಗುಗಳು ವನಲಕ್ಷ್ಮಿಯ ಹಲ್ಲುಸಾಲು :

ಜಯಜಯ ರುತಿಯಂ ಖಗಸಂ
ಚಯರುತಿಯಿಂದೈದೆ ಮಾಳ್ಪ ವನಲಕ್ಷ್ಮೀಕಾಂ
ತೆಯ ಕಾಂತಧವಳದಂತಾ
ಳಿಯವೊಲ್ ಸೊಗಯಿಸಿತು ಕುಂದಕುಟ್ಮಳ ನಿಕರಂ

(ಚಂದ್ರಪ್ರಭ ಪುರಾಣ : ೨-೯೫).

ಕ್ವಚಿತ್ತಾಗಿ ಗಂಡಸಿನ ಹಲ್ಲಿನ ವರ್ಣನೆಯೂ ಇದೇ ರೀತಿ ಬಂದಿದೆ: "ಮಲ್ಲಿಕಾ ಮುಕುಳ ದಂತಕಾಂತಿಗಳ್ ಮೆಲ್ಲಮೆಲ್ಲನೆ ಪೊದಳ್ದು ತೋರ್ಪಿನಂ. . . . ನುಡಿದನೆರ್ದು ಮಾಧವಂ" (ಮಲ್ಲಿನಾಥ ಪುರಾಣ : ೧೪-೩೫). ಒಂದೆಡೆ ಮಲ್ಲಿಗೆಮೊಗ್ಗು ನಖ ಭ್ರಾಂತಿಯನ್ನು ತಂದಿದೆ :

ಮಲ್ಲಿಗೆಯರಲಂ ಕೊಯ್ಯಲ್
ಮೆಲ್ಲನೆ ಕೈಯಿಕ್ಕಲೊಗೆದ ನಖದ ದ್ಯುತಿಯಂ
ಮಲ್ಲೀಕುಟ್ಮಳಮೆಂದಾ
ನಲ್ಲಳ್ಪಯಲಂ ತುಡುಂಕಿ ಕೌತುಕಮಾಂತಳ್

(ಉದ್ಭಟಕಾವ್ಯ : ೯-೬೨).

ಮಲ್ಲಿಗೆ ಮೊಗ್ಗುಗಳನ್ನು ಧರಿಸಿದ ಮಾಮರದ ತಳಿರಿನ ಹಾಗೆ ಹೆಣ್ಣಿನ ತುಟಿಯ ಚಿಗುರಿನ ನಡುವೆ ಬಿಳಿ ಹಲ್ಲು ಹೊಳೆದವು :

ಮಲ್ಲಿಗೆ ಮುಗುಳಿಂ ತಳಿರಂ
ಮೆಲ್ಲಗೆ ಮುಸುಕಿದವೊಲ್ ಅಂಗನೆಯಧರ ಲಸ
ತ್ಪಲ್ಲವಮಂ ಸುಲಿಪಲ್ಲಿಂ
ದಲ್ಲುಗುವೆಳವೆಳಗಿನಿಂದದೇಂ ಮುಸುಕಿದರೋ

(ಲೀಲಾವತಿ ಪ್ರಬಂಧ : ೯-೮೦).

ಮಲ್ಲಿಗೆ ಬರೀ ಚೆಲುವಾದ ಹೂವಷ್ಟೇ ಅಲ್ಲ. ಚೆಲುವನ್ನು ಸೃಷ್ಟಿಸುವ ಸಾಧನ ಗಳಲ್ಲಿ ಅದೂ ಒಂದು. ಸುಭದ್ರೆಯಂಥ ಚೆಲುವೆಯನ್ನು ಸೃಷ್ಟಿಸುವಾಗ ಮನ್ಮಥ ಬಳಸಿದ ಸಾಮಗ್ರಿಗಳಲ್ಲಿ ಮಲ್ಲಿಗೆಯೂ ಇತ್ತು : "ಚಂದ್ರಂ ಮಳಯಾನಿಳಂ ಮಳಯಜಂ ನೀರೇಜಮಿಮ್ಮಾವು ಮಲ್ಲಿಗೆಯೆಂದಿಂತಿವನಟ್ಟಿಅಿಂದಮರ್ದಿನೊಳ್ ತಾನೆಟ್ಟಿತ್ತಯಿಂ ತೊಯ್ದು ಮೆಲ್ಲಗೆ ಸಂದಂಗಜನೆಂಬ ಅಜ ಪಡೆದನಾ ಕಾಂತಿಯಿಂ ಕಾಂತೆಯಂ" (ಪಂಪಭಾರತ : ೪-೭೫).

ಮಲ್ಲಿಗೆ ಒಂದು ಹೆಣ್ಣು ; ಸ್ಫುರದ್ರೂಪಿಯಾದ ಹೆಣ್ಣು ; ಚೂತರಾಜನಿಗೆ ಸಾಕ್ಷಾತ್ ಮನ್ಮಥನೇ ಕೈಧಾರೆಯೆರೆದು ಕೊಟ್ಟ ಅಪೂರ್ವ ವಧು. ಈ ಮದಾಳಿ

ಕುಂತಳೆ ಮಲ್ಲಿಕಾವಧುವಿನ ಬಗೆಗೆ ನಾಗಚಂದ್ರ ಮೈಮರೆತು ಬಣ್ಣಿಸಿದ್ದಾನೆ: (ಮಲ್ಲಿನಾಥಪುರಾಣ: ೬-೩೨ ರಿಂದ ೩೭). 'ಮಲ್ಲಿಗೆ ಒಬ್ಬ ಸುಂದರನರ್ತಕಿ, ಮಾಮರ ಅವಳ ನಾಟ್ಯಶಾಲೆ' ಎನ್ನುತ್ತಾನೆ ಷಡಕ್ಷರ ಕವಿ: "ಮಲ್ಲಿಗೆವಧು ಲಾಸ್ಯಮಭ್ಯಸಿಪ ನರ್ತನದ ಶಾಲೆ" (ರಾಜಶೇಖರ ವಿಳಾಸ: ೯-೫೩).

ಈ ಮಲ್ಲಿಕಾಲಲನೆ ಎಂಥ ಹಾಡುಗಾರ್ತಿ? ಕೇಳಿ:

"ಮಧುಪಾವಳೀ ನಿನದವೆಂಬ ಕಳಧ್ವನಿಯಿಂದೆ ಮಲ್ಲಿಕಾ
ಲಲಿತೆ ಕಡಂಗಿ ಪಾಡಿದಳ್" (ಜಗನ್ನಾಥ ವಿಜಯ: ೧೪-೨೩).

"ಮಲ್ಲಿಗೆ ನೂತ್ನ ಪುಷ್ಪವತಿಯಾಗಿರೆ" (ಕಾವ್ಯಸಾರ (ಮಲ್ಲಣ): ೧೦-೩೩) ಎನ್ನುವಾಗ ಕವಿಗೆ ಮಲ್ಲಿಗೆಯು ಹೆಣ್ಣೇ! ಅಂತೆಯೇ ಅಭೇದಭಾವದಿಂದಲೇ ಬಣ್ಣಿಸಿದ್ದಾನೆ.

ಹೀಗೆ ಹೂವಿಗೂ ಸ್ತ್ರೀಯರಿಗೂ ನಿಕಟ ಸಂಬಂಧವಿರುವುದರಿಂದಲೇ ಹೂವೆಂದರೆ ಹೆಣ್ಣು, ಹೆಣ್ಣು ಎಂದರೆ ಹೂ ಎಂಬಂತಾಗಿದೆ. ಸ್ತ್ರೀಯರ ಹೂಪೂಜೆ ಎಷ್ಟು ಆಹ್ಲಾದಕರವಾಗಿದೆ ನೋಡಿ: "ಪರಿತಂದುತ್ಸಾಹದಿಂದರ್ಚಿಸಿದರೊಸೆದು ವಾಸಂತಿಯಂ ಸಾಂದಿನಿಂ ಮಾಮರನಂ ಶ್ರೀಖಂಡದಿಂ ಮಲ್ಲಿಗೆಯ ನಗುವಿಂ ಚಂಪಕಾನೀಕಮಂ ಕತ್ತುರಿಯಿಂ .... ಕಾಂತೆಯರ್ಕಳ್" (ಲೀಲಾವತಿ ಪ್ರಬಂಧ: ೧೩-೬೪).

ಒಬ್ಬ ತರಳೆ ಮಲ್ಲಿಗೆ ಹೂ ಕೊಯ್ದದ್ದು ಹೀಗೆ: 'ನನಗಿನ್ನೇನು ಬೇಡ; ನನ್ನ ಗಂಡನ ಆಲಿಂಗನ ಮತ್ತು ಮಲ್ಲಿಗೆ ಇವು ಎಂದೆಂದೂ ಕುಂದದಿರಲಿ' ಎಂದು ಹಾರೈಸುತ್ತಾ ಮಲ್ಲಿಗೆಯನ್ನು ಕೊಯ್ದಳು:

ವಲ್ಲಭನ ತೋಳ ಸೋಂಕುಂ
ಮಲ್ಲಿಗೆಯುಂ ಕುಂದದಿರ್ಕೆ ಸಂತತಮೆನಗಾ
ನೊಲ್ಲೆಂ ಪೆಱತನೆನುತ್ತಂ
ಮಲ್ಲಿಗೆಯಂ ಪಿಕನಿನಾದೆ ಕೊಯ್ದಳದೊರ್ವಳ್

(ಸೂಕ್ತಿಸುಧಾರ್ಣವ: ೧೧-೪೫).

ಮಲ್ಲಿಗೆ – ವಸಂತ: ವಸಂತ ಬಂತೆಂದರೆ ಮಲ್ಲಿಗೆಗೆ ಹೊಸ ಪ್ರಾಯ. ಅದಕ್ಕೆ ಸತ್ವ ಕೂಡಿಬರುತ್ತದೆ. "ಪಾದರಿ ಪೂತುವು ತೋರಿದುವಾದವು ಮಲ್ಲಿಗೆಗಳೆಯ್ದಿ ಪಣ್ತುವು ಮಾವು" (ಆದಿಪುರಾಣ: ೧೧-೪೫). "ಬಂದ ವಸಂತದೊಳ್ ಸಹಕಾರ ಭೂರುಹದೊಳಂಕುರಂ ಪುಟ್ಟುವಂತೆ ಮಲ್ಲಿಕಾಕುಸುಮದೊಳ್ ಘರಿಮಳಂ ಪುಟ್ಟುವಂತೆ" (ಅಜಿತನಾಥ ಪುರಾಣ: ೬-೨೪ವ). ವಸಂತಮಾಸ ಬಂತೆಂದರೆ

ಅದೊಂದೇ ಬರಲಿಲ್ಲ; ಅದರೊಟ್ಟಿಗೇ ಮಾವು, ಮಧುದೂತಿ, ಮಲ್ಲಿಗೆಗಳೂ ಬಂದವು ಎನ್ನುತ್ತಾನೆ ಇನ್ನೊಬ್ಬ ಕವಿ: "ಒದವಿ ಧರಾತಳಕ್ಕೆ ಬರುತಿರ್ದ ವಸಂತನ ಕೂಡೆ ಮಾವು ಬಂದುದು ಮಧುದೂತಿ ಬಂದುದೆಳಮಾವು ಮಲ್ಲಿಗೆ ಬಂದುದು" (ಸೂಕ್ತಿಸುಧಾರ್ಣವ: ೧೦-೧೩).

ವಸಂತನು ಕೂಡ ಮಲ್ಲಿಗೆಯಿಂದ ಬಲ್ಲಿದನಾದ. ಏಕೆಂದರೆ ಅದರ ಸಹಾಯ ಸಹಕಾರಗಳು ಮಹತ್ವದವು. ಅದು ತನ್ನ ಸೌರಭದಿಂದ ಜನರ ಮನಸೆಳೆದು ರಸರೋಮಾಂಚನಗೊಳ್ಳುವಂತೆ ಮಾಡುವುದು. ಈ ಕಾರಣದಿಂದಲೇ ಅದಕ್ಕೆ ಅಗ್ರಮಹಿಷಿ ಪಟ್ಟ:

> ಬಲ್ಲಹನಾದನುರ್ವಿಗೆ ಬಸಂತನವಂಗೆ ಸಹಾಯನಾತನಿಂ
> ಮಲ್ಲಿಗೆಗಾದುದಗ್ರಮಹಿಷೀಪದಮಿಂ ಪೆಱತಾವುದೆಲ್ಲಿಯುಂ
> ಮಲ್ಲಿಗೆಯಾಣೆ ಮಲ್ಲಿಗೆಯ ಘೋಷಣೆಯೆಂದು ಕಡಂಗಿ ನಲ್ಲರ
> ಲ್ಲಲ್ಲಿಯೆ ಸೂಡಿ ನೋಡಿ ಸಲೆ ಸೌರಭದಿಂ ದಳವೇಱಿ ಸೊಕ್ಕುವರ್

(ಸೂಕ್ತಿಸುಧಾರ್ಣವ: ೧೦-೬೭).

ಮಲ್ಲಿಗೆ ತನ್ನ ಸುವಾಸನೆ ಮತ್ತು ಶುಭ್ರಬೆಳಗಿನಿಂದ ದಿಗಂತದವರೆಗೆ ಸಾಗ ಬಲ್ಲುದು, ಕೀರ್ತಿಯನ್ನು ದಿಗಂತವಿಶ್ರಾಂತ ಮಾಡಬಲ್ಲುದು ಎಂದು ಮೆಚ್ಚಿ, ಚೈತ್ರ ಮತ್ತು ಮನ್ಮಥರು ವಸಂತದಲ್ಲಿ ಮಲ್ಲಿಗೆಗೆ ಅಧಿರಾಜಪಟ್ಟವನ್ನು ಕಟ್ಟಿದರು:

> ಮುಗಮುಗಿಸಲ್ಕೆ ಮುಂದಯಿಸಿ ದಿಕ್ತಟಮಂ ಬಟಸಲ್ಕೆ ಪೀರ್ವ ತುಂ
> ಬಿಗೆ ತಣಿಪಲ್ಕೆ ನಮ್ಮ ಜಸಮಂ ಬೆಳಗಲ್ಕಿದೆ ಸಾಲ್ಗುಮೆಂದು ತ
> ಳ್ತಗಲದಲಂಪಿನಿಂ ಮಧು ಮನೋಭವರಿರ್ವರುಮಟ್ಟಿವಟ್ಟಿ ಮ
> ಲ್ಲಿಗೆಗೆ ಬಸಂತದೊಳ್ ಬಯಸಿ ಕಟ್ಟಿದರೊಲ್ದಧಿರಾಜಪಟ್ಟಮಂ

(ಆದಿಪುರಾಣ: ೧೧-೧೦೭).

ಮಲ್ಲಿಗೆಯಿಂದಲೇ ಚೈತ್ರಕ್ಕೆ 'ಮಧುಮಾಸ'ವೆಂಬ ಹೆಸರು ಬಂದುದು:

> ಅಸದಳಮಾಗೆ ಮಲ್ಲಿಗೆಯ ಬಂಧುರಗಂಧಮನಾಂತು ತೆಂಕಣಿಂ
> ಪೆಸಗುಪ ಗಾಳಿ ಗಂಧವಹನಾದುದು ಮಾಗಿಯ ಪೋಗು ಕಾಟ್ಪಿರಂ
> ಮಸಗುವ ಮಲ್ಲಿಕಾಮಧುವಿನಿಂ ಮಧುಮಾಸಮುಮಾಯ್ತು ಕೈದುವಂ
> ಪೊಸಯಿಸಿ ಮಲ್ಲಿಕಾಕುಸುಮದಿಂ ಕುಸುಮಾಯುಧನಾದನಂಗಜಂ

(ಮಲ್ಲಿನಾಥ ಪುರಾಣ: ೬-೪೮).

ಹೂಬಳ್ಳಿಗಳಲ್ಲಿ ಮಲ್ಲಿಗೆ, ಫಲಮರಗಳಲ್ಲಿ ಮಾಮರ ಶ್ರೇಷ್ಠವಾದುವೆಂದು ಮೆಚ್ಚಿದ ಚೈತ್ರರಾಜನು ಅವನ್ನು ಕಣ್ಣು ಮಿಟುಕಿಸದೆ ಕಣ್ಣಬರ ಹಿಂಗುವಂತೆ ಪ್ರೀತಿ ಪೂರ್ವಕವಾಗಿ ನೋಡಿದನಂತೆ :

ಚಳಿಕೆಗೆಯಾದುವಾವುದಱ ಬಲ್ಮುಗುಳಾವುದಱಗ್ರಪಲ್ಲವಾ
ವಳಿ ಮುಡಿಯೊಳ್ತೊಡರ್ಚೆ ರತಿಗೊಪ್ಪಮನಿತ್ತುದು ಪುಷ್ಪವಲ್ಲಿಯುಂ
ಫಳತರುವುಂ ದಿಟಕ್ಕೆ ಪೆಱತಾವುದೊ ಮಲ್ಲಿಗೆ ಚೂತಮೆಂದೆ ಕ
ಣ್ಗಳ ಪಸವೋಡುವನ್ನಮೆಮೆಯಿಕ್ಕದವಂ ಮಧು ನಿಂದು ನೋಡಿದಂ

(ಮಲ್ಲಿನಾಥ ಪುರಾಣ : ೫–೫೫).

ವಸಂತನೆಂಬ ಕಮ್ಮಾರನು ಮಸೆದು ತಯಾರಿಸಿದ ಅಲಗೇ ಮಲ್ಲಿಗೆ ಎನಿಸಿದೆ ಒಬ್ಬ ಕವಿಗೆ :

ಪೊಸ ಸಿರಿಗಂಧದೊಳ್ ತೊಡೆದು ಕರ್ಪುರದೊಳ್ ಪುಳಿಗರ್ಚಿ ಕೂಡೆ ಬೆ
ಳ್ಪಿಸೆಯೆ ಹಿಮಾನಿಳಂ ತೆಗೆಯೆ ಪೂರ್ಣನಿಶಾಕರನೆಂಬ ಸಾಣೆಯೊಳ್
ಕುಸುಮಶರಂಗೆ ಜಾಣ್ ನೆಱೆಯಲೆಂದು ವಸಂತಕನೆಂಬ ಕಮ್ಮಱಂ
ಮಸೆದಲಗೆಂಬಿನಂತೆಸೆಯುತಿರ್ದುವು ಮಲ್ಲಿಗೆಗಳ್ ಬಸಂತದೊಳ್

(ಸೂಕ್ತಿಸುಧಾರ್ಣವ : ೧೦–೭೮).

ಆದ್ದರಿಂದಲೇ 'ಮಂಗಳಪಾಠಕಂ ಮದಾಳಿಕುಂತಳೆಗೆ ಮಲ್ಲಿಕಾವಲ್ಲಭೆಗಭಿಮುಖನಾಗಿ ನಿಂತು' ಈ ರೀತಿ ಕೀರ್ತಿಸಿರುವುದು :

ರತಿ ಮದನಂ ವಸಂತಸಮಯಂ ಪುಳಿನಂ ನಳಿನಂ ಕೊಳಂ ಹಿಮ
ದ್ಯುತಿ ಲತೆ ಮಾವು ಕೀರಕಳಭಂ ಕಳಕಂಠರವಂ ರಥಾಂಗದಂ
ಪತಿ ತಳಿರುಯ್ಯಲೋಪರಸುಸಿಲ್ನನೆವಿಲ್ ನನೆಯಂಬು ಮಂದಮಾ
ರುತ ನಳಿನೀನಿನಾದಮಿವಱಿಂ ಪೊಸಮಲ್ಲಿಗೆಗಕ್ಕೆ ಮಂಗಳಂ

(ಮಲ್ಲಿನಾಥ ಪುರಾಣ : ೬–೪೭).

ಮಲ್ಲಿಗೆ ಮತ್ತು ಬಿಳುಪು : ಮಲ್ಲಿಗೆ ತನ್ನ ಬಿಳುಪು ಮತ್ತು ಶುಭ್ರವರ್ಣ ದಿಂದ ದೈನಂದಿನ ಮಾತುಕತೆಗಳಲ್ಲಿ, ಕಾವ್ಯಲೋಕದಲ್ಲಿ ಅನೇಕ ಕಡೆ ಹೋಲಿಕೆಯ ವಸ್ತುವಾಗಿ ಬಳಕೆಯಾಗಿದೆ. ಶುಭ್ರಕಾಂತಿಯ ಧವಳಿಮೆಗೆ ಮಲ್ಲಿಗೆ ಕೊಡುವ ಮೆರುಗು ಸಾಮಾನ್ಯವೇ ? "ಮಿಸುಪ ದುಕೂಲದೊಳ್ಪುಡಿಗೆ . . . ಮಲ್ಲಿಕಾ ಕುಸುಮ ಮನಾಂತ ಕುಂತಳಭರಂ ಸುಲಿಪಲ್ಗಳ ಕಾಂತಿಯಿಂ ಬೆಳರ್ತಸೆಯೆ" (ಜಗನ್ನಾಥ

ವಿಜಯ : ೨-೭೧). ಬಿಳುಪಿನ ಹೋಲಿಕೆ ಬಂದಾಗಲೆಲ್ಲಾ ಅಲ್ಲಿ ಮಲ್ಲಿಗೆ ಇರಲೇ ಬೇಕು. ಇದನ್ನು ಪರಿಭಾವಿಸಿ :

ಸೊಗಯಿಪ ತಾರಕೋತ್ಕರದ ಮಧ್ಯದ ಶೀತ ಮರೀಚಿ ರೋಹಿಣೀ
ಯುಗಮೆನೆ ಚೆಲ್ವುವೆತ್ತು ಲತಿಕಾಳಿಯ ಮಧ್ಯದ ಚೂತಮಲ್ಲಿಕಾ
ಯುಗಮೆನೆ ಶೋಭಿಸಿರ್ದ ವನಿತಾಳಿಯ ಮಧ್ಯದೊಳಂದು ನಾಡೆಯುಂ
ಬಗೆಗೊಳಿಸಿತ್ತು ಮತ್ತಜಿತಸೇನ ಮುನೀಶ ಶಶಿಪ್ರಭಾಯುಗಂ

(ಚಂದ್ರಪ್ರಭ ಪುರಾಣ : ೭-೧೫೦)

ಮಾಮರವು ಬ್ರಾಹ್ಮಣನಂತೆ ಕಂಡ ಕವಿಗೆ ಅವರ ಮೇಲೆ ಹಬ್ಬಿದ ಹೂಬಿಟ್ಟ ಮಲ್ಲಿಗೆಬಳ್ಳಿ ಜನಿವಾರದಂತೆ ಶೋಭಿಸಿದೆ (ಸೂಕ್ತಿಸುಧಾರ್ಣವ: ೧೦-೨೭). ಬಿಳಿಯ ಬಣ್ಣಕ್ಕೆ ಮಲ್ಲಿಗೆ ಪದವನ್ನು ಪರ್ಯಾಯವಾಗಿ ಬಳಸಿದ್ದು ಕಂಡುಬರುತ್ತದೆ. ಕುದುರೆ ಗಳನ್ನು ಹೆಸರಿಸುವಾಗ ಈ ಮಾತು ಬಂದಿದೆ: "ಕರಿಯ ಕಣ್ಣಾಗಲಿಂದ್ರಾಯಧಂ ಬಿಳಿಯ ಕಣ್ಣಿರೆ ಮಲ್ಲಿಕಾಕ್ಷಂ" (ಮಂಗರಾಜ ನಿಘಂಟು : ೨೮-೧೧). ಬೆಳುದಿಂಗಳ ವರ್ಣನೆ ಬಂದಾಗ ಮಲ್ಲಿಗೆಯ ಹೋಲಿಕೆ ಇರಲೇಬೇಕು. "ಮಲ್ಲಿಗೆಯರಳ್ಗೂಡಿ ಪಾಲ್ದಳಿವಂದದಿ ಚೆಲ್ಲಿತು ಬೆಳುದಿಂಗಳು ಇಳೆಗೆ" (ಮೋಹನತರಂಗಿಣಿ : ೧೮-೧೦೨). ಮೊಸರನ್ನ ಹೇಗಿತ್ತು ? "ಮಲ್ಲಿಗೆಯರಳಂತೆ ಬಿಚ್ಚೋಗರ ಮೊಸಱು" (ಮೋಹನ ತರಂಗಿಣಿ: ೩-೫೭); "ಮಲ್ಲಿಗೆಯರಳಂತೆ ಬೆಳ್ಗೂಳು" (ಮೋಹನತರಂಗಿಣಿ: ೩೧-೩೭).

ಆಕಾಶದಲ್ಲಿ ನಕ್ಷತ್ರಗಳಿದ್ದಂತೆ ಭುವಿಯಲ್ಲಿ ಮಲ್ಲಿಗೆಯರಳು. ಮಲ್ಲಿಗೆ ಮಾಮರದಲ್ಲಿ ಆಶಳಿಡೆ. ಅವು ನಕ್ಷತ್ರಗಳಂತೆ ಇವೆ; ದುಂಬಿವಿಂಡು ಕತ್ತಲೆಬಳಗ ದಂತೆ ಕಂಗೊಳಿಸಿದೆ:

ಮಲ್ಲಿಗೆ ಮಾಮರದೆಳದಳಿ
ರಲ್ಲಿ ಮುಗುಳ್ತಡರೆ ಮುಗುಳ್ಗಳೆಸೆದವು ಸಂಧ್ಯಾ
ಸಲ್ಲಲಿತ ತಾರಕಾಳಿವೊ
ಲಲ್ಲಿಳಿಪಾಱಡಿಗಳಿಳಿವ ತಮಮೆನಿಸಿರ್ದುಂ

(ರಾಜಶೇಖರವಿಳಾಸ : ೨-೪೧).

ಗಿರಿಯ ತಪ್ಪಲಿನಲ್ಲಿ ಹೂಕೊಯ್ಯುವ ಸಿದ್ಧವನಿತೆಯರು ನಕ್ಷತ್ರಗಳನ್ನೇ ಮಲ್ಲಿಗೆ ಯೆಂದು ಭ್ರಮಿಸಿ ಕೊಯ್ಯಲು ಹೋದರಂತೆ :

ಮಲ್ಲಿಗೆಗೆತ್ತು ತಾರಗೆಯನಾಗಳೆ ಕೊಯ್ಯಲೊಡರ್ಚುವರ್ ಸಮು
ತ್ಫುಲ್ಲಸಿತಾಬ್ಜಮೆಂದು ಶಶಿಯಂ ತಿಱಿಯಲ್ಬಗೆದಂದು ನೋಡುವರ್

(ವೃಷಭೇಂದ್ರ ವಿಜಯ : ೧-೫೫).

ಮಲ್ಲಿಗೆಹೂ ಕೊಯ್ಯುವ ಮುಗುದೆ ಹೀಗೆ ಕಾಣಿಸುತ್ತಿದ್ದಳು :

ನೀರೇಜವದನೆ ತಿಱಿದಳ್
ತೋರಿದ ಮಲ್ಲಿಗೆಯ ಮುಗುಳನಾಗಳ್ ಕಾಶ್ಮೀ
ರಾರುಣ ಕರಪಲ್ಲವದಿಂ
ತಾರಗೆಯಂ ತಿಱಿವ ಪೂರ್ವಸಂಧ್ಯಾಂಗನೆವೋಲ್

(ಕಾವ್ಯಸಾರ: ೭೩೫).

ಮಲ್ಲಿಗೆಯ ಸಚಿತ್ರವರ್ಣನೆ: ಪ್ರಕೃತಿಯ ಮಡಿಲಲ್ಲಿ ಮಲ್ಲಿಗೆಯದು ಹಿರಿಯ ಸ್ಥಾನ. ವಸಂತಮಾಸದಲ್ಲಿ ಮಲ್ಲಿಗೆ ಅರಳಿದ್ದು ಹೀಗಿತ್ತು :

ಅರಲ ಸರಲ್ ಸರಲ್ಗಡೆಸೆವಿಕ್ಷುಧನುರ್ಲತೆ ಬಿಲ್ಗಡಲ್ಲಿಯುಂ
ತಿರು ಗಡ ಪದ್ಮಸೂತ್ರಮೆಸೆವಂ ಗಡ ತಾನುಮನಂಗನೆಂದುಮಿಾ
ಪರಿ ಪರಿಹಾಸ್ಯವಾಡಿಮೆನುತುಂ ನಗೆಯೊಳ್ ಪೊರೆಯೋಗಿ ಬಿಚ್ಚತಂ
ಬಿರಿವವೊಲಂತದೇಂ ಬಿರಿದುದೋ ಪೊಸಮಲ್ಲಿಗೆಗಳ್ ಬಸಂತದೊಳ್

(ಸೂಕ್ತಿಸುಧಾರ್ಣವ: ೧೦-೬೬).

ಮಲ್ಲಿಗೆ ಬಿರಿಯಿತು ಎಂದರೆ ನಲ್ಲರೆದೆ ಬಿರಿಯಿತೆಂದೇ ಅರ್ಥ :

ಪರೆಯೆ ಪಸುರ್ಪು ಬೆಳ್ಪಡರೆ ಬಲ್ಮುಗುಳೊಳ್ ಪೊರೆದೋಱೆ ತೆಂಬೆರಲ್
ಪೊರೆವೊರೆಯಂ ಸಡಿಲ್ಚೆ ನಡುಪೊಂಗಿರೆ ಮಲ್ಲಿಗೆಗಳ್ ಬಸಂತದೊಳ್
ಬಿರಿದೊಡೆ ನಲ್ಲರಂ ನೆನೆದ ನಲ್ಲರ ಮೆಲ್ಲೆರ್ದೆಗಳ್ ಬಸಂತದೊಳ್
ಬಿರಿದುವದೆಂತೊ ಮಲ್ಲಿಗೆಗೆ ನಲ್ಲರ ಮೆಲ್ಲೆರ್ದೆ ವೇಳೆಗೊಂಡುದೋ

(ಪಂಪಭಾರತ: ೫-೩೩).

ಜನ್ನಕವಿ ನೀಡಿರುವ ಮಲ್ಲಿಗೆ ಹೂಬಿಡುವ ಸಹಜಸುಂದರ ವರ್ಣನೆ ನೋಡಿ:

ಎಲೆ ಸುಲಿದೆಡೆಗಳ ಕಣ್ ಕ
ಣ್ಗೆಲೆಯೆಡೆ ಗಂಟೊಡೆದು ಮೊನಸಿ ನನೆದೋಱೆ ಮುಗು
ಳ್ತಲರ್ದು ಮಱಿದುಂಬಿಗಂ ತೆಂ
ಬೆಲರ್ಗಂ ಮುದ್ದಾದುವಲ್ಲಿ ಪೊಸಮಲ್ಲಿಗೆಗಳ್

(ಯಶೋಧರಚರಿತೆ: ೪-೨)

(ಎಲೆ ಉದುರಿ ಮಲ್ಲಿಗೆಯಂಟಿನ ಗೆಣ್ಣುಗೆಣ್ಣಿಗೂ ಗಂಟುವೊಡೆದು ಮೂತಿ ಇಟ್ಟು, ಬಲಿತು, ಮೊಗ್ಗಾಗಿ ವನದಲ್ಲಿ ಆಗ ತಾನೆ ಅರಳಿದ ಮಲ್ಲಿಗೆಗಳು ತಮ್ಮ ಸೌರಭಕ್ಕಾಗಿ ತಂಗಾಳಿಗೂ, ಮಕರಂದಕ್ಕಾಗಿ ದುಂಬಿಗಳಿಗೂ ಪ್ರಿಯವಾದುವು).

ಮಲ್ಲಿಗೆಯ ಬಹೂಪಯೋಗಿ ಗುಣವನ್ನು ಅಗ್ಗಳ ಕವಿ ಹೀಗೆ ಗುರುತಿಸಿದ್ದಾನೆ :

ತಾನುಗುಟಿುತ್ತಮಿರ್ಪ ಪೊಸಗಂಪುಮನಿತ್ತೆ ತೆಮಳ್ದಿಕೊಂಡು ಮಂ
ದಾನಿಳನುಯ್ಯುತಿರ್ಪ ತನಿಗಂಪುಮನಿತ್ತೆ ಮರಳ್ದು ಭೃಂಗ ಸಂ
ತಾನಮುಣುತ್ತಮಿರ್ಪ ನಱುಗುಂಪುಮನಿತ್ತೆ ಗಡಂ ಪ್ರಫುಲ್ಲ ಮ
ಲ್ಲೀ ನವಪುಷ್ಪಮೋಗರದ ಕಂಪುಗಳಾಗರಮಾಯ್ತು ಸುಗ್ಗಿಯೊಳ್

(ಚಂದ್ರಪ್ರಭ ಪುರಾಣ : ೭–೪೯).

ಮಲ್ಲಿಗೆಯೆಂದರೆ ಸಾಮಾನ್ಯವಲ್ಲ :

ಮಧುಲಕ್ಷ್ಮೀ ನೃತ್ಯಗೇಹಂ
ಮಧುವ್ರತಸ್ತ್ರೀನಿಕಾಯ ಮಾಧ್ವೀಕಗೃಹಂ
ಮಧುಮಿತ್ರ ಜಗಜ್ಜೈತ್ರಾ
ಯುಧಗೃಹಮೆನೆ ವಿಕಚ ವಿಚಕಿಳಂ ಸೊಗಯಿಸುಗುಂ

(ಚಂದ್ರಪ್ರಭ ಪುರಾಣ : ೭–೫೦).

'ಮೃಡಾರಿ ವೀರನೆನಿಸಿದ ಮನ್ಮಥನ ಜಯಶಕ್ತಿ'ಯೆಂದು ಅರಳಿದ ಮಲ್ಲಿಗೆಯನ್ನು ಸಾಕ್ಷಾತ್ ಹರಿ ಮೆಚ್ಚಿ ಹೊಗಳಿದ್ದಾನೆಂದಮೇಲೆ ಹೇಳುವುದೇನಿದೆ ? :

ಬನದ ವಿಭೂತಿ ತೆಂಬೆಲರ ಮೆಯ್ಸಿರಿ ತುಂಬಿಯ ಗೀತಶಾಲೆ ಚೈ -
ತ್ರನ ತೊಡವೋತಗಲ್ದಿರ್ದದಲ್ಲಣಮೋಪರ ಸ್ಫೈಪು ಕಾಮನಂ
ಬಿನ ಕಣಿ ಪುಷ್ಪಸಾಯಕನ ಕೀರ್ತಿಯ ಬಿಟ್ಟುಮೊದಲ್ ಮೃಡಾರಿವೀ
ರನ ಜಯಶಕ್ತಿಯೆಂದಲರ್ದ ಮಲ್ಲಿಗೆಯಂ ಹರಿ ಮೆಚ್ಚಿ ನೋಡಿದಂ

(ಜಗನ್ನಾಥ ವಿಜಯ : ೧೪–೭೦).

ಷಡಕ್ಷರಕವಿ ನೀಡಿರುವ ಈ ಮಲ್ಲಿಕಾತರುಣಿಯ ಸುಂದರವರ್ಣನೆಯನ್ನು ನೋಡಿ:

ಹೂಗಳ ಧೂಳೆಂಬ ಮಂಕುಬೂದಿಯನ್ನು ಹಚ್ಚಿ ಮಲ್ಲಿಗೆಯೆಂಬ ತರುಣಿಯ ದುಂಬಿಗಳೆಂಬ ನೀಲಮಣಿಮಾಲೆಯನ್ನು ಕದಿಯುವ ಗಾಳಿಯೆಂಬ ಕಳ್ಳನನ್ನು ಕೋಗಿಲೆ ಕಂಡು ಗಟ್ಟಿಯಾಗಿ ಕೂಗಿಕೊಳ್ಳಲು ಭಯಗೊಂಡ ಮಲ್ಲಿಕಾತರುಣಿ ಸುರಿಸಿದ ಕಣ್ಣೀರೋ ಎಂಬಂತೆ ಆ ಬಳ್ಳಿಯಲ್ಲಿ ಅರಳಿದ ಹೂಗಳಿಂದ ಮಕರಂದ ಸೋರುತ್ತಿತ್ತು :

ಅರಳ ಪರಾಗಮೆಂಬ ಪೊಸ ಬೇಳ್ಪೆಯ ಬೂದಿಯನಿಟ್ಟು ಮಲ್ಲಿಕಾ
ತರುಣಿಯ ಭೃಂಗ ನೀಲಮಣಿಮಾಲೆಯನೊಯ್ವಲರೆಂಬ ಚೋರನಂ
ಪರಭೃತನಂದು ಕಂಡು ಮಿಗೆ ಭಯಂಬಡೆದೇಳ್ದು ಕಣ್ಣನೀ
ರ್ಸುರಿವವೊಲಾಕೆ ತದ್ವಿಕಚಪುಷ್ಪಗಳಿನ್ಮಧುಬಿಂದು ಸೋಱುಗುಂ

(ರಾಜಶೇಖರವಿಳಾಸ : ೧೦–೫೫).

ಜಾನಪದ ಸಾಹಿತ್ಯದಲ್ಲಿ ಮಲ್ಲಿಗೆ: ಹಳ್ಳಿಯ ಮುಗ್ಧ ಜೀವಿಗಳ ಮಾತುಕತೆಗಳಲ್ಲಿ, ಅವರು ಬಳಸುವ ಹತ್ತಾರು ಗಾದೆಮಾತುಗಳಲ್ಲಿ, ಅವರು ಮೆಲುಕು ಹಾಕುವ ನೂರಾರು ಹಾಡುಗಳಲ್ಲಿ ಮಲ್ಲಿಗೆ ಬಳಕೆಯಾಗಿದೆ. ಜನಪದ ಕಥೆಗಳಲ್ಲಿ ಅದರ ಬಣ್ಣನೆ, ಹೋಲಿಕೆಗಳು ಉಂಟು. ಮಲ್ಲಿಗೆಯು ಕಥೆಯ ಪಾತ್ರವಾಗಿ ಬಂದು ಮನ ರಂಜಿಸುವ ನಿದರ್ಶನಗಳೂ ಇವೆ. ಏಳು ಮಲ್ಲಿಗೆ ತೂಕದ ರಾಜಕುಮಾರಿಯ ಕಥೆಯಂತೂ ತುಂಬಾ ಜನಪ್ರಿಯವಾಗಿದೆ. ಜಾನಪದ ಹಾಡುಗಳ ಸಂಕಲನದ ಹೆಸರು 'ಮಾತಾಡು ಮಲ್ಲಿಗೆ, ಮಲ್ಲಿಗೆ ದಂಡೆ, ಮಲ್ಲಿಗೆ ನಗುತಾವೆ, ಹಸಿರುಗಿಡದ ಮ್ಯಾಗೆ ಮೊಸರು ಚೆಲ್ಲೇದ' ಎಂದು ಮೊದಲಾಗಿ ಉಂಟು. ಒಂದು ಹಾಡಿನ ಹೆಸರು ಕೂಡ 'ಮಾತಾಡು ಮಲ್ಲಿಗೆ'.¹ 'ಮಾತಾಡ್ಮಾತಾಡು ಮಲ್ಲಿಗೆ' ಎಂದು ಆರಂಭವಾಗುವ ಹಾಡು, 'ಒಬ್ಬಾನ ಕೆಡವಿದ್ದೆ, ಒಬ್ಬಾಗೆ ನೀರ ಬಿಡುತಿದ್ದೆ ಮಲ್ಲಿಗೆ . . . .' (ಪು. ೩೦) ಎಂದು ಸಾಗುತ್ತದೆ.

ಸೃಷ್ಟಿಯಲ್ಲೆಲ್ಲಾ ವ್ಯಾಪಿಸಿರುವ ಪರಾತ್ಪರಶಕ್ತಿಯನ್ನು ಗುರುತಿಸಿದ ಜಾನಪದ ಕವಿಗಳು ಅದನ್ನು ಹೀಗೆ ವ್ಯಕ್ತಪಡಿಸಿದ್ದಾರೆ:

ಹೂವಿನಾಗ ಹುದುಗ್ಯಾನ ಮಾಲ್ಯಾಗ ಮನಗ್ಯಾನ
ಮೊಗ್ಗಾಗಿ ಕಣ್ಣ ತೆರೆದಾನ ಲಿಂಗಯನ
ನೋಡಟಿಗೆ ನಿದ್ದೆ ಬಯಲಾಗಿ (ಕನ್ನಡ ಜಾನಪದ ಗೀತೆಗಳು : ೧೬)

ಹೂವಿನಲ್ಲಿ ಹುದುಗಿ, ಮಾಲೆಯಲ್ಲಿ ಅಡಗಿ, ಮೊಗ್ಗಿನಲ್ಲಿ ಕಣ್ಣು ತೆರೆಯುವ ಈಶ್ವರ ಶಕ್ತಿಯ ವಿಲಾಸವನ್ನು ಕಂಡು ಅವರಿಗೆ ನಿದ್ರೆ ಬಯಲಾಯಿತಂತೆ!

ಮಲ್ಲಿಗೆ ಹೂ ಕೂಡ ಅರಳಿ ಯಾರಾದರೂ ನಮ್ಮನ್ನು ಎತ್ತಿಕೊಂಡು ಹೋದಾರೆಯೆ ಎಂದು ಕಾತರಿಸುತ್ತವೆಯಂತೆ: "ಮಲ್ಲಿಗೆ ಹೂವರಳಿ ಬಾಯ ಬಿಡುತಾವ" (ಗೀತೆಗಳು : ೨೪೯).

ಗಂಡನ ಮನೆಯಲ್ಲಿರುವ ಒಬ್ಬ ಹೆಣ್ಣುಮಗಳು ತವರನ್ನು ನೆನೆಸುತ್ತಿದ್ದಾಳೆ. ಒಂದು ಮುಂಜಾನೆ ಹಿತ್ತಲಿಗೆ ಬಂದು ಮಲ್ಲಿಗೆ ಬಳ್ಳಿಯನ್ನು ನೋಡುತ್ತಾಳೆ. ಹಬ್ಬಿ ಬೆಳೆದಿರುವ ಬಳ್ಳಿ ತುಂಬಾ ಹೂವರಳಿವೆ. ಇರುವವಳು ತಾನೊಬ್ಬಳೆ, ಎಷ್ಟು ಹೂ ಬೇಕಾದೀತು? ತನ್ನ ತವರಿನಲ್ಲಾದರೆ ಬಹಳ ಮಂದಿ ಇದ್ದಾರೆ. ಅವರಾದರೂ ಮುಡಿದು ಆನಂದಿಸಲಿ ಎಂಬ ಆಸೆ ಆಕೆಗೆ:

ಒಬ್ಬಳಿರುವ ಮನೆಗೆ ಹಬ್ಬದಿರು ಮಲ್ಲಿಗೆ
ಒಬ್ಬಳೇ ಕುಯ್ದು ಮುಡಿಲಾರೆ, ಮಲ್ಲಿಗೆ
ಹಬ್ಬೋಗು ನನ್ನ ತವರೀಗೆ

—ಎಂದು ಕೇಳಿಕೊಳ್ಳುತ್ತಾಳೆ.

ಇನ್ನೊಂದು ಪ್ರಸಂಗ : ತವರೂರಿನಿಂದ ತಾಯಿ ಮಗಳನ್ನು ಕರೆದುಕೊಂಡು ಹೋಗಲು ಬಂದಿದ್ದಾಳೆ. ತವರೂರ ಆಸೆ ಯಾವ ಹೆಣ್ಣಿಗಿಲ್ಲ? ಆದರೆ ಇವಳಿಗೆ ತನ್ನ ಮನದನ್ನನನ್ನು ಅಗಲಿ ಹೋಗಬೇಕಲ್ಲ ಎಂಬ ಚಿಂತೆ ಕಾಡಿದೆ. ಆಗ ಮಗಳು ತಾಯಿಗೆ ಹೇಳುವ ಮಾತುಗಳಿವು:

ಹಚ್ಚಡದ ಪದರಾಗ ಅಚ್ಚಮಲ್ಲಿಗಿ ಹೂವ
ಬಿಚ್ಚಿ ನನಮ್ಯಾಲ ಒಗೆವಂಥ ರಾಯರನ
ಬಿಟ್ಟ್ಯಾಂಗ ಬರಲೆ ಹಡೆದವ್ವ?

ಹಾಸಿಗೆ ಹಾಸೆಂಜೆ ಮಲ್ಲೀಗಿ ಮುಡಿಯೆಂದ
ಬ್ಯಾಸತ್ತರ ಮಡದಿ ಮಲಗೆಂದ ನನ ರಾಯ
ತನ್ನ ನೋಡಿ ತವರ ಮರಿಯೆಂದಾ

(ಗರತಿ ಹಾಡು : ೭೭).

ಇನ್ನೊಂದು ಚಿತ್ರ: ಹೆಂಡತಿ ತೌರೂರಿಗೆ ಹೊರಟು ನಿಂತಾಗ ಗಂಡ ಹೇಳುತ್ತಾನೆ:

ಹೋಗೋಳು ಹೋಗತೀಯ ನೀರ್‌ಯಾರೆ ಹುಯ್ಯೋರು
ಹಿತ್ತಿಲಾಗಿರುವ ಮಲ್ಲಿಗೆ ವನಕೆ, ಹೂವಾದರ್ಯಾರೆ ಮುಡಿಯೋರು ?
ನೀರು ಹುಯ್ಯೋಳವಳೆ ಹೂವ ಮುಡಿಯೋಳವಳೆ
ನನಗಿಂತ ಜಾಣೆ ಮನೆಯಾಗೆ

(ಗೀತೆಗಳು : ೭೮೭).

ಅಣ್ಣನೊಬ್ಬ ತಂಗಿಯನ್ನು ನೋಡಲು ಹೊರಡುತ್ತಾನೆ. ದಾರಿಯಲ್ಲಿ ಮಲ್ಲಿಗೆ ಹೂ ಮಾರುವವರು ಸಿಕ್ಕಾಗ ಹೀಗೆನ್ನುತ್ತಾನೆ :

ಅಚ್ಚಮಲ್ಲಿಗೆ ಹೂ ಮುಚ್ಚಿ ಮಾರುವ ಜಾಣಾ
ನಾ ಕೊಳುವೆನಿದರ ಬೆಲೆ ಹೇಳೋ ತಂಗಿಗೆ
ಸುರುಳಿಗೂದಲದ ಸುಗುಣೀಗೆ

(ಗರತಿ ಹಾಡು : ೬೦).

ಅಣ್ಣ ಬರುವ ಸಂಭ್ರಮ ತಂಗಿಗೆ. ಅಣ್ಣನ ಆಗಮನಕ್ಕೆ ಪ್ರಕೃತಿಯೇ ನಲಿಯುತ್ತಿದೆ—ಅವಳ ಮನಸ್ಸಿನ ಪ್ರತೀಕವಾಗಿ. ಅವಳು ಹೇಳುತ್ತಾಳೆ:

ಸರದಾರ ಬರುವಾಗ ಸುರಿದಾವ ಮಲ್ಲೀಗಿ
ದೊರೆ ನನ್ನ ತಮ್ಮ ಬರುವಾಗ ಯಾಲಕ್ಕಿಗೊನಿ ಬಾಗಿ
ಹಾಲ ಸುರಿದಾವ

(ಗರತಿ ಹಾಡು : ೫೮).

ಗಂಗೆ-ಗೌರಿಯರ ಜಗಳ ಪುರಾಣ ಪ್ರಸಿದ್ಧ. ಅದು ಆರಂಭವಾದುದು ಮಲ್ಲಿಗೆ ಕೊಯ್ಯುವುದರಿಂದ :

> ಮಲ್ಲಣ್ಣ ಬೆಳೆದನು ಮಲ್ಲಿಗೆ ಹೂವ....
> ಮಲ್ಲಣ್ಣನ ತೋಟಕೆ ಹೋದಳು ಗೌರಿ
> ಮಲ್ಲಿಗೆ ಹೂವ್ನೆಲ್ಲಾ ಕೂದಳು ಗೌರಿ....
> ಒಳ್ಳೊಳ್ಳೆ ಹೂವ್ನೆಲ್ಲಾ ಗೌರಿ ತಾ ಮುಡಿದು
> ಬತ್ತಿ ಬಾಡಿದೂವ ಗಂಗೆಗೆ ಮಡಗಿ....
> ಬತ್ತಿ ಬಾಡಿದ ಹೂವ್ನ ಬೇಲಿಗೆ ಚೆಲ್ಲಿದಳು ಗಂಗೆ... (ಗೀತೆಗಳು : ೭೬೫)

ಸರಿ, ಆರಂಭವಾಯಿತು ಕಾಳಗ !

ಮಲ್ಲಿಗೆ ಹಳ್ಳಿಗರ ರಸಿಕಜೀವನದ ಒಂದು ಅಂಗವಾಗಿ ಮೆರೆದಿರುವುದನ್ನು ಹತ್ತಾರು ನಿದರ್ಶನಗಳಲ್ಲಿ ನಾವು ಕಾಣಬಹುದು. ವೀಳ್ಯ ಮತ್ತು ಮಲ್ಲಿಗೆಗಳು ಗ್ರಾಮೀಣರ ರಸಿಕಜೀವನದಲ್ಲಿ ಅಗತ್ಯವಸ್ತುಗಳಾಗಿದ್ದುವು. "ವೀಳ್ಯ ಮೆಲ್ಲಲಿ ಬೇಕು, ಮಲ್ಲೀಗಿ ಬೇಕು ತುರುಬೀಗೆ" (ಗರತಿ ಹಾಡು : ೫೦)—ಇದು ಅವರ ಹಂಬಲ.

'ನನ್ನ ಅಂಗಳದಾಗ ಮಲ್ಲಿಗೆಗಿಡ ಹುಟ್ಟಲಿ' ಎನ್ನುವ ಹಾರೈಕೆ ಎಲ್ಲ ಜನಪದರಲ್ಲೂ ಕಾಣುತ್ತದೆ (ಗರತಿಹಾಡು : ೯೧). ನಿಜ, ಹಳ್ಳಿಗಳಲ್ಲಿ ಎಲ್ಲರ ಮನೆಯ ಮುಂದೆ ಮತ್ತು ಹಿತ್ತಲಲ್ಲಿ ಮಲ್ಲಿಗೆಯಂಟು ಇದ್ದೇ ಇರುತ್ತದೆ. ಮಲ್ಲಿಗೆ ಜನಪದ ಜೀವನದಿಂದ ಬೇರ್ಪಡಿಸಲಾಗದ ಅಂಗವಾಗಿ ಬಿಟ್ಟಿದೆ. ಅವರು ಮೃದುವಾದುದು, ಕೋಮಲವಾದುದು ಎಂದೆನಿಸಿದ್ದಕ್ಕೆಲ್ಲಾ ಮಲ್ಲಿಗೆಯನ್ನೇ ಹೋಲಿಸಿಯಾರು ! ಹೆಣ್ಣನ್ನು ಸಂಬೋಧಿಸುವಾಗಲೂ 'ಮಾವನ ಮಗಳೆ ಮಲ್ಲಿಗೆಯರಳೆ' ಎಂದಾರು. ಗಂಡನು ಹೆಂಡತಿಯನ್ನು 'ಮಲ್ಲಿಗೆ' ಎಂದು ಕರೆದಂತೆ, ಹೆಂಡತಿ ತನ್ನ ಗಂಡನನ್ನು 'ಮಲ್ಲಿಗೆರಾಯಾ' ಎನ್ನುತ್ತಾಳೆ :

> ಎಲ್ಲಿ ಹೋಗಿದ್ದೆ ನನ್ನ ಮಲ್ಲಿಗೆಂಥಾ ರಾಯಾ
> ಎಲ್ಲಾರೂ ನನ್ನ ಬೈದಾರ (ಕನ್ನಡ ಜಾನಪದ ಗೀತೆಗಳು : ೧೧೨);

> ಕಮಲದ ಹೂ ನಿನ್ನ ಕಾಣದಲೆ ಇರಲಾರೆ
> ಮಲ್ಲೀಗಿಮಾಯ ಬಿಡಲಾರೆ ಕೇದೀಗಿ
> ಗರಿ ನಿನ್ನ ಅಗಲಿ ಇರಲಾರೆ (ಅದೇ : ೧೨೧).

ಮಗಳ ಬಾಳು ಸರಿಯಾಗಲಿಲ್ಲವೆಂಬ ಕೊರಗಿನಲ್ಲಿ ತಾಯಿ ಹೀಗೆಂದಿದ್ದಾಳೆ :

> ಮಲ್ಲಿಗೆಯಂಥಾ ಮಗಳೀಗೆ ಎಲ್ಲಿತ್ತೊ ಒಗೆತನ
> ಹುಲ್ಲಾಗ ಬೆಂಕಿ ಒಗೆಧಾಂಗ (ಕನ್ನಡ ಜಾನಪದ ಗೀತೆಗಳು : ೧೨೩).

ಜಾರಿದ ಹೆಣ್ಣನ್ನು ಕಂಡು ಕನಲಿದಾಗ :

ಮಲ್ಲೀಗಿ ಹೂವಿನಂತ ಮದ್ವಿಗಂಡನ ಬಿಟ್ಟು
ಹುಲ್ಲ ಕುಯ್ಯರನ ಹುಡುಕ್ಯಾಳ (ಗರತಿಹಾಡು : ೩೨)

ಮಗುವನ್ನು ಕುರಿತು :

ಮಲ್ಲಿಗೆ ಹೂವೆ, ಇಲ್ಯಾಕೆ ನಿಂತಿದ್ದಿ ಎಲ್ಲಾರ ಕಣ್ಣು ನಿನ ಮೇಲೆ ಕಂದಯ್ಯ
ವಲ್ಲಿ ಸೆರಗೆಲ್ಲಾ ಪರಿಮಳ (ಗರತಿಹಾಡು : ೧೩೨).

ತನ್ನ ಪ್ರಿಯನಿಗೆ ಪ್ರೇಯಸಿಯ ಕಿವಿಮಾತು ಇದು :

ಮಲ್ಲಿಗೆಯ ಮುಡಿಯದಿರೋ ನನ ಗೆಣೆಯಾ . . . .
ಮಲ್ಲಿಗೆ ಗಮಲಕ್ಕೆ ಮಾನ್ಯವಾರೆದ್ದವರೆ
ಸದ್ದಡಗಲಿ ಸುಮ್ಮನಿರೋ . . . . (ಗೀತೆಗಳು : ೧೫೪);

ಮಲ್ಲಿಗ್ಹೂವ ಮುಡದು ನಿಲ್ಲದಿರು ಓಣ್ಯಾಗ
ನಲ್ಲೇರ ಕಣ್ಣು ನಿನ ಮ್ಯಾಲೆ (ಗೀತೆಗಳು : ೩೧೪).

ಮಲ್ಲಿಗೆಯ ಕೋಮಲತೆಯ ಬಗ್ಗೆ ಅವರಿಗೆ ತುಂಬ ಅಭಿಮಾನ : "ಮೈದುನ ಬೈದರ ಹೊಯ್ದು ಹೋಳಿಗೆಯಾದ, ಕೊಯ್ದು ಮಲ್ಲೀಗಿ ನನೆಯಾದ" (ಗರತಿಯ ಹಾಡು. ೭೨). "ಮಲ್ಲೀಗಿ. ಮುಡಿದು ಅಂಗಳಕ ಒಗೆದಂಗ" (ಗರತಿಹಾಡು: ೭೯) ಮೊದಲಾದ ಮಾತುಗಳಲ್ಲಿ ಅದು ಧ್ವನಿತವಾಗಿದೆ.

ಅಂತೆಯೇ ಮಲ್ಲಿಗೆಯ ಬಗ್ಗೆ ಜನಪದರಿಗೆ ತುಂಬಾ ಕಾಳಜಿ. ಅದರ ಆರೈಕೆ ಮಾಡುವಾಗ, ಅದು ಹಬ್ಬಿ ಬೆಳೆದಾಗ, ಮೈತುಂಬ ಹೂಬಿಟ್ಟಾಗ ನೋಡಿ ನಲಿವುದೇ ಅವರಿಗೆ ಪರಮ ಪುರುಷಾರ್ಥ :

'ಜಾತಿಮಲ್ಲಿಗೆ ಹೂವ ಜಗ್ಗಿ ಕೊಯ್ಯುವರೇನ, ಜಗ್ಗಿದರೆ ಮಗ್ಗೆ ಉದುರ್‍ಯಾವ' ಎಂಬ ಮಾತುಗಳಲ್ಲಿ ಅದು ವ್ಯಕ್ತವಾಗಿದೆ.

ಮಲ್ಲಿಗೆಯನ್ನು ಕುರಿತ ಈ ಜಾನಪದ ಹಾಡು ಹೆಣ್ಣು ದೊಡ್ಡವಳಾಗಿ ಗಂಡನ ಮನೆ ಸೇರುವುದನ್ನು ಎಷ್ಟು ಸಾಂಕೇತಿಕವಾಗಿ ಹೇಳಿದೆ, ನೋಡಿ :

ಹುಟ್ಟಿದ ಮಲ್ಲಿಗೀ ಗಿಡ ಹುಟ್ಟಿದಂಗ ಇರೂದಿಲ್ಲ.
ದಿನಕೊಂದು ಪರಿಯ ಚಿಗವೂದ ಸೂವಯ್ಯ
ದಿನಕೊಂದು ಪರಿಯ ಚಿಗವೂ ಮಲ್ಲಿಗೆ ಹೂವ
ಮತ್ತೊಬ್ಬ ಜಾಣ ಮುಡಿಯೋದ ಸೂವಯ್ಯ (ಮಲ್ಲಿಗೆ ದಂಡೆ : ೯೪).

ಮದುಮಕ್ಕಳ ಅಲಂಕಾರಕ್ಕೆ ಅವರು ಮಲ್ಲಿಗೆಯನ್ನು ಅನೇಕ ವಿಧವಾಗಿ ಬಳಸುತ್ತಾರೆ :

ಗುಂಡುಮಲ್ಲಿಗೆ ಹೂವ ತೊಂಡಲದ ನನೆದಂಡೆ . . . .
ಹೂವನ ಕೊಂಡು ಮೆರೆಸಿದರ ಬೆಳತನಕ (ಕನ್ನಡ ಜಾನಪದ ಗೀತಗಳು : ೬೮).

ಜಾನಪದ ದೇವರುಗಳಿಗೂ ಅಷ್ಟೆ, ಮಲ್ಲಿಗೆಯೆಂದರೆ ಪಂಚಪ್ರಾಣ. ಮಲ್ಲಯ್ಯ ರಂಗಯ್ಯರು ಮಲ್ಲಿಗೆಯನ್ನು ಹೇಗೆ ಬಯಸಿದ್ದಾರೆ, ನೋಡಿ :

ಮಲ್ಲೀಗೆ ಗಮ್ಮೆಂದೋ ಮುಡಿಯಾಗೆ ಮಲ್ಲಯ್ನ
ಈಭೂತಿ ಗಮ್ಮೆಂದೋ ಹಣೆಯಾಗೆ (ಗೀತೆಗಳು : ೧೦೪) ;

ಮಲ್ಲಯ್ಯ ಬಂದರೆ ಮಲ್ಲಿಗೂವೇ ಬೇಕು
ಈರಣ್ಣ ಬಂದರೆ ಮುಡಿ ಬೇಕು (ಗೀತೆಗಳು : ೨೭೮) ;

ದುಂಡುಮಲ್ಲಿಗೆ ಹೂವ ಮಂಡೇ ಮೇಲಿಟ್ಟುಕೊಂಡು
ಚೆಂಡನಾಡುತ ಬಂದನೇ ರಂಗಯ್ಯ (ಗೀತೆಗಳು : ೧೨).

ನಾವು ಏನಾಗಬೇಕು ? ಬೇರೆ ಏನೋ ಆಗುವುದಕ್ಕಿಂತ ಮಲ್ಲಿಗೆ ಹೂವಾಗಿ ಅರಳಿದರೆ ವಾಸಿ ಎನ್ನುತ್ತಾರೆ ಜಾನಪದ ಅನುಭಾವಿಗಳು :

ಬಾಳೆ ಮೀನಾದರೆ ಜೋಗೇರು ಹಿಡಿದಾರೆ
ಮಲ್ಲಿಗೂವಾಗೋ ವನದಲ್ಲಿ
ಮಲ್ಲಿಗೂವಾದರೆ ನಾರೇರು ಮುಡಿದಾರು (ಗೀತೆಗಳು : ೩೬೮).

ಮಲ್ಲಿಗೆ ಹೂವೆಂದರೆ ಜನರಿಗೆ ಎಲ್ಲಿಲ್ಲದ ಸಂಭ್ರಮ, ಸಡಗರ :

ಹೂವ್ ಬಂದವೆ ಜಾಣೆ ಹೂವು ಮಲ್ಲಿಗ್ಹೂವು
ಹೂವೋಜಿ ನಿಜಗಲ್ಲುದುರ್ಗಾದಿಂದ
ಹೂವ್ಬಂದವು ಜಾಣೆ ತುರುಬೀಗೆ (ಗೀತೆಗಳು : ೪೦೩).

ಆಧುನಿಕ ಕವಿಗಳು ಕಂಡ ಮಲ್ಲಿಗೆ : ಜನಮನವನ್ನು ಸೂರೆಗೊಂಡ ಮಲ್ಲಿಗೆ ಆಧುನಿಕ ಕವಿಗಳ ಮನವನ್ನು ಕದ್ದಿದೆ, ಗೆದ್ದಿದೆ. ಸುವಾಸನೆ ಬೀರುತ್ತಾ ಮೂಡುವ ಈ ಬಿಳಿಹೂ ಹಸುರಾದ ಗಿಡದಲ್ಲಿ ಹೇಗೆ ಅರಳಿತು ಎಂಬ ಬೆರಗು ಕವಿ ಶಿವರುದ್ರಪ್ಪನವರಿಗೆ :

ನೋಡು ಇದೊ ಇಲ್ಲರಳಿ ನಗುತಿದೆ
ಏಳುಸುತ್ತಿನ ಮಲ್ಲಿಗೆ
ಇಷ್ಟು ಹಚ್ಚನೆ ಹಸಿರುಗಿಡದಿಂ
ದೆಂತು ಮೂಡಿತೊ ಬೆಳ್ಳಗೆ ? (ಚೆಲುವು-ಒಲವು : ೧).

ಚೆಲುವಿನ ನೆಲೆಯನ್ನು, ಬೆಲೆಯನ್ನು ತಿಳಿಯ ಹೊರಟ ಈ ಕವಿಗೆ ಮಲ್ಲಿ ಕಂಡದ್ದು ಹೀಗೆ:

'ತನ್ನ ಶುಭ್ರತೆಯಿಂದ, ಸುವಾಸನೆಯಿಂದ ಮಾನವನ ಮನವನ್ನು ಶುಭ್ರ ಗೊಳಿಸುವ ಶಕ್ತಿ ಅದಕ್ಕಿದೆ' ಎನ್ನಿಸಿದೆ:

ಅದು ಬರೀ ಮೈಮರೆಸುವ ಚೆಲುವಲ್ಲ ;
ಹರಿವ ಮನವನು ಹಿಡಿದು ಒಂದೆಡೆ
ನಿಲಿಸಿ ತೊಳೆದಿದೆ ಹೂವಿದು (ಚೆಲುವು-ಒಲವು: ೭).

ಚೆಲುವಿನ ಕಣಿಯಾದ ಹೂವು ಶಾಶ್ವತವಾದ ಸುಖ, ತೃಪ್ತಿಗಳನ್ನು ನೀಡಬಲ್ಲುದು ಎನ್ನುತ್ತಾರೆ—ರಸಿಕರಂಗ:

ಮಲ್ಲಿಕಾ ಬಕುಲ ಚಂಪಕಾ
ಸಾಕು ನನಗಿನಿತೆ ಈ ಸುಖಾ ....
ಮಲ್ಲಿಕಾಲತೆಯ ಮನೆಯಲಿ
ಮೊಗ್ಗೆ ಹೂಗಳ ನೆರಳಲಿ ....
ಸಿಕ್ಕು ನಾ ನಲಿವನುಣ್ಣುವೆ
ಸಿಡಿಲನೂ ಸವಿಯ ಮಾಡುವೆ .... (ಬಾಸಿಗ: ೧೬).

ಬಾಳಿನಲ್ಲಿ ಸಿಡಿಲನ್ನೂ ಸವಿಯಾಗಿಸುವ ಶಕ್ತಿ ಮಲ್ಲಿಗೆಯಂಥ ಕುಸುಮಕ್ಕಿದೆ ಎಂಬುದು ಕವಿಯ ಅನುಭವ.

'ನಮ್ಮ ಹೂಗಳು, ಅವುಗಳ ಸೊಬಗು, ಸುವಾಸನೆಗಳು ನಂದನದ ಹೂಗಳಿ ಗಿಂತಲೂ ಮಿಗಿಲು' ಎನ್ನುತ್ತಾನೆ ಕವಿ. 'ಇಂದ್ರನ ನಂದನದ ಹೂವಾಡಿಗಿತ್ತೇರು ಮಂದಾರ ಹೂಗಳನ್ನು ತಂದು ಒಂದಾರ ಕೊಳ್ಳಿರೆಂದು ಬೀದಿ ಬೀದಿ ತಿರುಗಿದರೂ ಯಾರೂ ಕೊಳ್ಳಲಿಲ್ಲವಂತೆ! ಏಕೆಂದರೆ ಭೂಲೋಕದಲ್ಲಿ ಬೆಳೆವ ಮಲ್ಲಿಗೆಯಂಥ ಹೂ ಅವರಿಗೆ ಸಾಕಷ್ಟು ತೃಪ್ತಿ ತಂದಿವೆ:

ವಾಸವಾರಾಯನ ಹಿರಿಹೂವು ಎಂದು
ದೇಶವ ತಿರುಗಿದರು ಹೂವಾಡಗಿತ್ತೇರು . . .
ಒಂದಾರ ಕೊಳಲಿಲ್ಲ ಲೋಕದ ಮಂದಿ
ನಿಂದಾವ ಲೋಕದ ಬಲುಹೂವು ಎಂದೇನೋ? (ಬಾಸಿಗ: ೨೦)

ಎಂದಿದ್ದಾರೆ. "ರಮಣೀಯವಾದ ಹೂವೆನ್ನ ಆನಂದ, ಕಮನೀಯವಾದ ತಳಿರೆನ್ನ ಆನಂದ" ಎನ್ನುತ್ತಾಳಂತೆ ಪ್ರಕೃತಿ ಮಾತೆ. 'ಮಲ್ಲಿಗೆಯ ಸ್ವಾದವನ್ನು ಅನುಭವಿಸುವ ಹೃದಯವಂತಿಕೆ ಬೇಕು' ಎನ್ನುತ್ತಾರೆ ಕುವೆಂಪು:

ಆ ಚರಂಡಿಯ ನೆನೆವುದೇತಕೀ
ಮಲ್ಲಿಗೆಯ ಹೊದರೆಡೆಯೆ ನೀನು ?
ಅಲ್ಲಿ ದುರ್ನಾತವಿರೆ ಇದನೂ
ಅದನೆಗ್ಗೈದರೆ ಏನು ಬಂತು ? (ಮಂತ್ರಾಕ್ಷತೆ : ೩೩)

"ಕಟ್ಟೆಯುಮೇನೋ ಮಾಲೆಗಾಱನ ಪೊಸಬಾಸಿಗಂ ಮುಡಿವ ಭೋಗಿಗಳಿಲ್ಲದೆ ಬಾಡಿ ಪೋಗದೆ" (ಅನಂತನಾಥಪುರಾಣ : ೧-೪೫) ಎಂದು ಜನ್ನಕವಿ ಚಿಂತಿಸಿದಂತೆ, ರಾಷ್ಟ್ರಕವಿ ಕುವೆಂಪು ಹೀಗೆನ್ನುತ್ತಾರೆ :—

ಮಲ್ಲಿಗೆಯ ಹೂವಿಂದೆ ಮನೆಯೆಲ್ಲ ಘಂ
ಮುಡಿಯುವವಳಿಲ್ಲದೆಯೆ ಮನ ಬೆಕೋ ಬಿಂ
(ಮಂತ್ರಾಕ್ಷತೆ : ೩೩).

ಕಾಡಿನಲ್ಲಿ ಸದ್ದುಗದ್ದಲವಿಲ್ಲದೆ ಅರಳಿ ಮಾಧುರ್ಯವನ್ನು ಹಂಚುವ ಮಲ್ಲಿಗೆಯದು ಆದರ್ಶಬಾಳು. ಆ ಹೂವಿನಂತೆಯೇ 'ನೈಜಮಾದೊಳ್ಪಿನಿಂ ಬಾಳ್ವವೊಲು ಮನವನು ಅನುಗೊಳಿಸು ಗುರುವೇ' ಎಂದು ಡಿ.ವಿ.ಜಿ. ಪ್ರಾರ್ಥಿಸಿದ್ದಾರೆ :

ವನಸುಮದೊಲೆನ್ನ ಜೀವನವು ವಿಕಸಿಸುವಂತೆ
ಮನವನನುಗೊಳಿಸು ಗುರುವೇ, ಹೇ ದೇವಾ.
ಕಾನನದಿ ಮಲ್ಲಿಗೆಯು ಮೌನದಿಂ ಬಿರಿದು ನಿಜ
ಸೌರಭವ ಸೂಸಿ ನಲವಿಂ ತಾನೆಲೆಯ ಪಿಂತಿರ್ದು
ದೀನತೆಯ ತೋರಿ ಅಭಿಮಾನವನು ತೊರೆದು ಕೃತಕೃತ್ಯತೆಯ ಪಡೆವಂತೆ
(ಕನ್ನಡ ಬಾವುಟ : ೧೫೫).

'ಬಾಳಿನಲ್ಲಿ ನಾವು ಏನಾಗಬೇಕು ; ಏನಾಗಿ ಬದುಕಿದರೆ ಬಾಳು ಸಾರ್ಥಕವಾಗುತ್ತದೆ' ಎಂದು ತಿಳಿಸುವಾಗ ಈ ದಾರ್ಶನಿಕ ಕವಿ ಮಲ್ಲಿಗೆಯ ಪ್ರಸ್ತಾಪ ಮಾಡಿದ್ದಾರೆ :

ಹುಲ್ಲಾಗು ಬೆಟ್ಟದಡಿ ಮನೆಗೆ ಮಲ್ಲಿಗೆಯಾಗು . . .
ಬೆಲ್ಲ ಸಕ್ಕರೆಯಾಗು ದೀನ ದುರ್ಬಲರಿಂಗೆ
(ಮಂಕುತಿಮ್ಮನ ಕಗ್ಗ : ೭೮೯).

ಮಲ್ಲಿಗೆಯನ್ನು ಸಂತೈಸಬೇಕೆಂದು ತಂಗಾಳಿಯನ್ನು ಪ್ರಾರ್ಥಿಸಿದ್ದಾರೆ ಶ್ರೀನಿವಾಸರು :

ಎಲ್ಲ ಲತೆಗಳ ನೋಳ್ಪ ಮೊದಲಲ್ಲಿ ಬಂದು
ನಲ್ಲ ನೀ ಮರೆದಿರಲು ವಿರಹದಲಿ ನೊಂದು
ತಲ್ಲಣಿಸುವೀ ಮಲ್ಲಿಗೆಯನ್ನು ತರಿಸಂದು
ಲಲ್ಲೆಯಿಂ ಸಂತೈಸಿ ಪೊರೆ ದೀನಬಂಧು (ಅರುಣ : ೧೦).

ಮಲ್ಲಿಗೆಯನ್ನು ಕುರಿತ ವರಕವಿ ಬೇಂದ್ರೆಯವರ ಅನಿಸಿಕೆಗಳು ಹೃದ್ಯವಾಗಿವೆ:

ಗಮುಗಮಾ ಗಮಾಡಸತಾವ ಮಲ್ಲಿಗೆ
ನೀವು ಹೊರಟದ್ದೀಗ ಎಲ್ಲಿಗೆ? (ಗಂಗಾವತರಣ : ೭೦)

ಎಂದು ಪ್ರಶ್ನಿಸಿರುವ ಕವಿ, ಆ ಹೂವಿಗೆ ದೊರಕಿರುವ ಪ್ರಾಶಸ್ತ್ಯವನ್ನು ಸ್ಫುಟಗೊಳಿಸುವಂತೆ ಹೀಗೆ ಕೋರಿದ್ದಾರೆ:

ಎಲರೆಲೆಯ ಪರಿಮಳಿಸಿ
ನಾತಗೀತವನಳಿಸಿ
ಮೈಮನದಿ ನಂದನವನರಳಿಸುತಿರು
ಮೈಯ ಬಾನೊಳಗೆತ್ತು
ಅಲ್ಲಿ ಬೆಳಕನು ಬಿತ್ತು
ಮಣ್ಣನು ಕಂಪತ್ತ ಹೊರಳಿಸುತಿರು (ಗಂಗಾವತರಣ : ೯೨).

ಶಬ್ದಗಾರುಡಿಗ ಬೇಂದ್ರೆಯವರು ಮಲ್ಲಿಗೆ ಮೊಗ್ಗನ್ನು 'ಮುಚ್ಚುಮಲ್ಲಿಗೆ' ಎಂದಿದ್ದಾರೆ: "ಅಚ್ಚವಳ ಹಲ್ಲೀಗೆ ಸರಿ ಮುಚ್ಚುಮಲ್ಲಿಗೆ ನಿತ್ಯನಿರಂತರ ಇದು ಸುಗ್ಗಿ" (ಮೂರ್ತಿ ಮತ್ತು ಕಾಮಕಸ್ತೂರಿ : ೨-೪೭). ಮಲ್ಲಿಗೆಗೆ ಮನಸೋತ ಈ ಕವಿ, 'ಸುಗಂಧಗಂಧ ಮೋಹನೇ, ಮಂದಪವನವಾಹನೇ, ಚೂತಾಂಕುರ ಚಾಮರೇ, ಕೋಕಿಲ ನುತಿಗಾಯನೇ' ಎಂದು ಅದನ್ನು ಬಗೆಬಗೆಯಾಗಿ ಕೊಂಡಾಡಿ ಕವನ ಕಾಣಿಕೆಯೊಂದನ್ನು ಅದಕ್ಕೆ ಅರ್ಪಿಸಿದ್ದಾರೆ.

'ಹೆಣ್ಣಿಗೆ ಹೂವಿನ ಹಂಗೇಕೆ?' ಎಂದು ಪ್ರಶ್ನಿಸಿರುವ ಕಾವ್ಯಾನಂದರು ಅದಕ್ಕೆ ಹೀಗೆ ಕಾರಣಗಳನ್ನು ನೀಡಿದ್ದಾರೆ:

ತುಟಿ ಗುಲಾಬಿ, ಕಣ್ಣು ಕೋರಕ
ಮುಖವೆ ಕಮಲವು ಮಾನಿನಿ
ನಗೆಯೆ ಮಲ್ಲಿಗೆ ಕೆನ್ನೆ ಕೇದಗೆ
ರದನ ಕುಂದವು ಕಾಮಿನಿ (ಮಾನಸ ಸರೋವರ : ೩೪).

'ಮಧುಮಾಸ ಬಂದಿಹುದು ಮಧುಕರಿಗಳೇ ಬನ್ನಿ, ಮಧುರತರ ಗೀತಗಳಿನಾವು ನಲಿವ' ಎಂದು ಕರೆನೀಡಿರುವ ವಿಸೀ. ಯವರು "ಮೊಲ್ಲೆ ಮಲ್ಲಿಗೆ ತೆರೆದು ಬಿರಿಯುತಿರುವಲ್ಲಿ......ಚೆಲ್ಲಿಹವು ಇಬ್ಬನಿಯ ಮುತ್ತುಗಳನಿಲ್ಲಿ" (ವಿಸೀ ಗೀತೆಗಳು : ೨೮) ಎಂದು ನಿಸರ್ಗದ ಚೆಲುವ ಬಣ್ಣಿಸಿದ್ದಾರೆ.
'ಮಲ್ಲಿಗೆ'ಎಂಬ ಕವನದಲ್ಲಿ,

'ಮುಗಮುಗಿಪ ಮಲ್ಲಿಗೆ
ಮುಡಿದು ಬಾರೆನ್ನಲ್ಲಿಗೆ
ತುಟಿದೆರೆಯೊಳು ತಿಳಿನಗೆ
ಆಡಿರೆ ಬಾ, ಮೆಲ್ಲಗೆ.
ಎನ್ನ ಕಣ್ಣ ಹಾಹೆ ನೀನು
ನಿನ್ನಲಿ ನಾನಂತೇ,
ಎಮ್ಮ ಬಳಿ ಸೌಭಾಗ್ಯ
ವಿಂತೆ ರೂಪಾಂತಿರಲಿ'

(ಹೆಜ್ಜೆ ಪಾಡು : ೮೪)

ಎಂದು ಆಶಿಸಿದ್ದಾರೆ.

ಈ ರೀತಿಯಾಗಿ ಆಧುನಿಕ ಕವಿಕುಲ ಮಲ್ಲಿಗೆಯನ್ನು ತಮ್ಮ ಕಾವ್ಯಗಳಲ್ಲಿ ಕೊನರಿಸಿ, ಅರಳಿಸಿ, ಜನಮನದಲ್ಲಿ ಅದರ ನರುಗಂಪು ಸದಾ ತುಂಬಿರುವಂತೆ, ಅದರ ಚಿತ್ರ ಚಿತ್ತಭಿತ್ತಿಯಿಂದ ಮಾಸದಂತೆ ಮಾಡಿದ್ದಾರೆ.

ಹೀಗೆ, ಮಲ್ಲಿಗೆ ಕನ್ನಡ ಸಾಹಿತ್ಯದ ಉಗಮದಿಂದ ಇಂದಿನ ತನಕ, ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿ ತನ್ನ ಗಣನೀಯ ಸ್ಥಾನವನ್ನು ಉಳಿಸಿ ಬೆಳೆಸಿಕೊಂಡು ಬರುತ್ತಿದೆ. ಇದು ಅದರ ಜನಾನುರಾಗದ, ಲೋಕಪ್ರಿಯತೆಯ ಕುರುಹಾಗಿದೆ. ಮಲ್ಲಿಗೆಯನ್ನು ವಿಧವಿಧವಾಗಿ ವರ್ಣಿಸುವಲ್ಲಿ, ಅದರ ವರ್ಣ, ಆಕಾರ, ಸುಗಂಧ, ಗುಣ, ಪ್ರಭಾವ ಮೊದಲಾದವುಗಳಲ್ಲಿ ಹೊಸ ಹೊಸ ಭಾವಾರ್ಥಗಳನ್ನು ಗುರುತಿಸುವಲ್ಲಿ ನಮ್ಮ ಕವಿಗಳು ತಮ್ಮ ಕಾವ್ಯಶಕ್ತಿಯನ್ನು ಸೂರೆಗೈದಿದ್ದಾರೆ. ಈ ವಿಚಾರದಲ್ಲಿ ಹೊಸ ಆಯಾಮವನ್ನೇ ಸೃಷ್ಟಿಸಿದ್ದಾರೆಂದರೂ ಸರಿಯೆ. ಬಹಳ ಕಡೆ ಈ ಕವಿಕರ್ಮದಲ್ಲಿ ಕಲ್ಪನೆಯ ಕುಸುರಿಗೆಲಸ ನಡೆದಿದ್ದರೂ ವಾಸ್ತವಿಕತೆಯಿಂದ ದೂರ ಸರಿದಂತೆ ಕಾಣಿಸುವುದಿಲ್ಲ.

ಮಲ್ಲಿಗೆ ನಮ್ಮ ಕವಿಗಳಿಗೆ ಬರೀ ಹೂವಾಗಿ ಕಾಣದೆ, ಸಜೀವ ವಸ್ತುವಾಗಿ ಕಂಡುದರಲ್ಲಿ, ಕಷ್ಟಸುಖಗಳೆರಡನ್ನು ಅನುಭವಿಸುವ ಚೈತನ್ಯಸ್ವರೂಪಿಣಿಯಾಗಿ ನಿಂದುದರಲ್ಲಿ ವೈಶಿಷ್ಟ್ಯವಿದೆ; ಹೊಸ ಕಾಣ್ಕೆಯಿದೆ. ಅದನ್ನು ಅವರು ನಮಗೆ ಕಾಣಿಸಿದ ರೀತಿಯಲ್ಲಿ ನಾವೀನ್ಯವಿದೆ, ಕೌಶಲ್ಯವಿದೆ.

ಮಲ್ಲಿಗೆಗೆ ಕಂಪು ಇಂಪು ಸೊಂಪುಗಳು ಎಷ್ಟೇ ಇರಲಿ, ನಮ್ಮ ಕವಿ ಬಣ್ಣನೆಯ ಮಲ್ಲಿಗೆ ಸೂಸುವ ನರುಗಂಪು ನಮ್ಮ ಹೃದಯ ತುಂಬಿ ಸೂಸುವಷ್ಟಿದೆ. ಅದು ಅರೆಯಾಗದ ಅಕ್ಷಯನಿಧಿ! ಅದನ್ನು ತುಂಬಿಕೊಂಡು ಆನಂದಪಡುವ ಸಹೃದಯತೆಯ ಕೊರತೆಯಾಗಬಾರದು, ಅಷ್ಟೆ.

# ವಡ್ಡಾರಾಧನೆಯ ಕಾಲ : ಮತ್ತಷ್ಟು ಸಾಮಗ್ರಿ

ಹಂಪ. ನಾಗರಾಜಯ್ಯ

ಹಳಗನ್ನಡ ಗದ್ಯಕೃತಿಯಾದ ವಡ್ಡಾರಾಧನೆಯ (–ವಡ್ಡಾ) ಕರ್ತೃ, ಕಾಲ, ದೇಶ, ಆಕರ—ಇವು ಇನ್ನೂ ಇತ್ಯರ್ಥಗೊಳಿಸಬೇಕಾಗಿರುವ ಯಕ್ಷಪ್ರಶ್ನೆಗಳಾಗಿಯೇ ಉಳಿದಿವೆ. ೧೯೬೬ರಲ್ಲಿ ನಾನು ಬರೆದು ೧೯೬೮ರಲ್ಲಿ ಮೈಸೂರು ವಿಶ್ವವಿದ್ಯಾನಿಲಯ ತನ್ನ ಪ್ರಚಾರೋಪನ್ಯಾಸ ಮಾಲೆಯಲ್ಲಿ ಪ್ರಕಟಿಸಿರುವ 'ವಡ್ಡಾರಾಧನೆ' ಎಂಬ ಹೆಸರಿನ ಕಿಸೆ ಹೊತ್ತಗೆಯಲ್ಲಿ ಪ್ರಾಸಂಗಿಕವಾಗಿ ಪ್ರಸ್ತಾಪಿಸಿದ ಸೂಕ್ಷ್ಮ ಸಂಗತಿಯೊಂದರ ಪುನರ್ ಪರಿಶೀಲನೆ ಈಗ ಪ್ರಸ್ತುತವೆನಿಸಿ, ಅದನ್ನೇ ವಿಸ್ತರಿಸುತ್ತಿದ್ದೇನೆ, ಮತ್ತಷ್ಟು ಪುಷ್ಟಿಕೊಡುವ ಸಾಮಗ್ರಿಯ ನೆರವಿನಿಂದ ; ಅದಕ್ಕೆ ಮೊದಲು ಹಿಂದೆ ನಾನು ಬರೆದ ಅಭಿಪ್ರಾಯವನ್ನು ಉದಾಹರಿಸುತ್ತೇನೆ : "ಚಾವುಂಡರಾಯ ಪುರಾಣದಲ್ಲಿ ಸಂಸ್ಕೃತ ಪದಗಳ ಪ್ರಯೋಗ ಅಧಿಕತರ, ಕನ್ನಡ ಪದಗಳ ಬಳಕೆ ವಿರಳವಲ್ಲದಿದ್ದರೂ ಕಡಮೆ. ಆದರೆ ಅದೇ ವಡ್ಡಾರಾಧನೆಯಲ್ಲಿ ಸಂಸ್ಕೃತ ಪದಗಳ ಪ್ರಯೋಗ ಕಡಮೆ, ಕನ್ನಡ ಮಾತುಗಳು ಹೇರಳ. ಗದ್ಯರಚನಾ ರೀತಿಯಲ್ಲಿ ಎರಡು ಹೊತ್ತಗೆಗಳಿಗೂ ಹೆಚ್ಚು ಹೋಲಿಕೆಯಿದ್ದರೂ ಚಾವುಂಡರಾಯ ಪುರಾಣದಲ್ಲಿ ಜೈನಮತದ ಮತಪ್ರಕ್ರಿಯೆಯ ವಿವರ ಹಾಗೂ ಪಾರಿಭಾಷಿಕ ಪದಪುಂಜ ವಡ್ಡಾರಾಧನೆಗಿಂತಲೂ ಎರಡುಪಟ್ಟು ಜಾಸ್ತಿಯಿದೆ. ಎರಡು ಹೊತ್ತಗೆಗಳಲ್ಲೂ ಸಂಸ್ಕೃತ–ಪ್ರಾಕೃತ ಮತ್ತು ಕನ್ನಡ ಪದ್ಯಗಳಿವೆಯಾದರೂ ಚಾವುಂಡರಾಯ ಪುರಾಣದಲ್ಲಿ ವಡ್ಡಾರಾಧನೆಯಲ್ಲಿರುವಷ್ಟು ಪದ್ಯಗಳಿಲ್ಲ. ಆದರಲ್ಲೂ ಪ್ರಾಕೃತ ಮತ್ತು ಸಂಸ್ಕೃತ ಪದ್ಯಗಳು ವಡ್ಡಾರಾಧನೆಯಲ್ಲಿ ಅಧಿಕತರವಾಗಿವೆ. ಒಂದು ಸ್ವಾರಸ್ಯವಾದ ವಿಶೇಷಾಂಶವೆಂದರೆ, ವಡ್ಡಾರಾಧನೆಯ ಮುದ್ರಿತವಾದ ಪ್ರತಿಯ

ಏಳನೆಯ ಪುಟದ ಅಡಿಟಿಪ್ಪಣಿಯಲ್ಲಿ ಕೊಟ್ಟಿರುವ 'ಪಡಿಗಹಮುಚ್ಚಂ ಠಾಣಂ....' ಎಂಬ ಪ್ರಾಕೃತ ಗಾಹೆ ಚಾವುಂಡರಾಯ ಪುರಾಣದಲ್ಲೂ ದೊರೆಯುವುದು. ಈಗ ಅಚ್ಚಾಗಿರುವ ಚಾವುಂಡರಾಯ ಪುರಾಣದ ಭಾಗದಲ್ಲೇ ಈ ಪ್ರಾಕೃತ ಗಾಹೆಯಿದ್ದು ತುಂಬಾ ಅಶುದ್ಧವಾಗಿದೆ. ಅದನ್ನು ವಡ್ಡಾರಾಧನೆಯ ಪ್ರತಿಯಿಂದ ಸರಿಪಡಿಸಿ ಕೊಳ್ಳಬಹುದು" (ಹಂಪನಾ: ವಡ್ಡಾರಾಧನೆ, ಎರಡನೆಯ ಮುದ್ರಣ, ೧೯೭೩, ಪುಟ ೩೨-೩೩).

ವಡ್ಡಾರಾಧನೆಯ ಮೊದಲನೆಯ ಕಥೆ ಸುಕುಮಾರಸ್ವಾಮಿಯ ಕಥೆ. ಅದರಲ್ಲಿ ಏಳನೆಯ ಪುಟದಲ್ಲಿ ಮೇಲೆ ಹೇಳಿದ ಪ್ರಸ್ತಾಪವಿದೆ. "....ಭೈಕ್ಷಕ್ಕೆಂದು ಕೌಶಂಬಿ ನಗರಮಂ ಪೊಕ್ಕು ಕಿಱುಮನೆ ಪೆರ್ಮನೆಯೆನ್ನದುಣಲ್ತಕ್ಕ ಮನೆಗಳಂ ಚರಿಗೆದೊಳಲುತ್ತಮಗ್ನಿಭೂತಿ ಬ್ರಾಹ್ಮಣನ ಮನೆಯಂ ಪೊಕ್ಕೊಡಾತನುಂ ಕಂಡಿದಿರಂ ಪರಿತಂದಾದಮಾನುಂ ಭಕ್ತಿಯಿಂದಂ ನಿಱಿಸಿ ಕಾಲಂ ಕರ್ಚಿ ಪಡಿಗಹಮುಚ್ಚಂ ಠಾಣಮೆಂದೀ ವೊಂಬತ್ತು ತೆಱದಿಂದಂ ಪುಣ್ಯಮಂ ಕೈಕೊಂಡು ಶ್ರದ್ಧೆ ಮೊದಲಾಗೊಡೆಯ ಏೞುಂ ಗುಣಂಗಳಿಂ ಕೂಡಿ ಪ್ರಾಸುಕಮಪ್ಪಾಹಾರಮನಾದಮಾನುಂ ಭಕ್ತಿಯಿಂದಂ ಬಡ್ಡಿಸೆಯುಂಡಿನ್ ಬೞಿಕ್ಕಕ್ಷಯದಾನಮೆಂದು ಪರಸಿಪೋಪಾಗಳ್."

ವಡ್ಡಾರಾಧನೆಯನ್ನು ಆರು ಹಸ್ತಪ್ರತಿಗಳಿಂದ (ಮತ್ತು ಮೊದಲನೆಯ ಕಥೆಗೆ ಮಾತ್ರ ಇನ್ನೊಂದು ಪ್ರತಿ 'ಜ') ಸಿದ್ಧಪಡಿಸಿದೆ. ಮೇಲೆ ಉದಾಹರಿಸಿರುವ ಭಾಗದಲ್ಲಿ ದಪ್ಪಕ್ಷರಗಳಲ್ಲಿ ಪ್ರತ್ಯೇಕಿಸಿ ತೋರಿಸಿರುವ 'ಪಡಿಗಹಮುಚ್ಚಂ ಠಾಣಂ' ಎಂಬುದು ಕ ಖ ಗ ಎಂಬ ಮೂರು ಪ್ರತಿಗಳಲ್ಲಿರುವ ಪಾಠ. ಇನ್ನುಳಿದ ನಾಲ್ಕು ಪ್ರತಿಗಳಲ್ಲಿ (ಘ ಚ ಛ ಜ)—

ಪಡಿಗಹಮುಚ್ಚಂ ಠಾಣಂ ಪಾಯೋೀಯಕಮುಚ್ಚಣಂ ಚ ಪಣಮಂಚ
ಮಣವಯಣ ಕಾಯಸುದ್ದಿಂ ಯೇಸಣಸುದ್ದಿಂ ಚ ಣವವಿದಂ ಪುಣ್ಣಂ ||

ಎಂಬುದಾಗಿ ಪೂರ್ತಿ ಪ್ರಾಕೃತ ಗಾಹೆಯಿದೆ. ಯಾವುದೇ ಒಂದು ಪಾಠವನ್ನು ಗ್ರಾಹ್ಯ ಅಗ್ರಾಹ್ಯ ಎಂದು ನಿರ್ಧರಿಸುವಾಗ ಹೆಚ್ಚಿನ ಹಸ್ತಪ್ರತಿಗಳಲ್ಲಿ ಇದೆಯೆಂಬ ಕಾರಣಕ್ಕಾಗಿ ಸ್ವೀಕಾರಾರ್ಹವೆಂದು ನಿರ್ಧಾರಿತವಾಗುವುದಿಲ್ಲ. ಹಸ್ತಪ್ರತಿಗಳಲ್ಲಿ ಪ್ರಾಚೀನವಾದುದು, ಶುದ್ಧವಾದುದು, ವಿಶ್ವಾಸಾರ್ಹವಾದುದು ಯಾವುದೆಂಬುದು ಮುಖ್ಯವಾಗುತ್ತದೆ. ವಡ್ಡಾರಾಧನೆಯ ಹಸ್ತಪ್ರತಿಗಳಲ್ಲಿ ಖ ಪ್ರತಿಗೆ ಸಂಪಾದಕರು ಬೆಲೆ ಕೊಟ್ಟಿದ್ದಾರೆ. ಅದರಂತೆ ಅವರು ಈಗ ಅಂಗೀಕರಿಸಿರುವ ಪಾಠ ಖ ಪ್ರತಿಗೆ ಅನುಗುಣವಾಗಿದೆ. ಸಂಪಾವಕರಾದ ಪ್ರಾ|| ದೊ. ಲ. ನ. ರವರು ಗ್ರಂಥ ಸಂಪಾದನಾಶಾಸ್ತ್ರದ ಶಿಸ್ತಿಗೆ ಬದ್ಧರಾಗಿದ್ದಾರೆ.

ಎಲ್ಲ ವೇಳೆಯಲ್ಲೂ ಪ್ರಾಚೀನ ಹಸ್ತಪ್ರತಿಯ ಪಾಠವೊಂದೇ ಸ್ವೀಕಾರ್ಯವೆಂದೇನೂ ಕಟ್ಟುನಿಟ್ಟಾದ ನಿಯಮವಿಲ್ಲ. ಸಬಲವಾದ ಸಮಂಜಸವಾದ ಕಾರಣ

ಗಳು ದೊರೆತಾಗ ಪ್ರಾಚೀನ ಪ್ರತಿಯ ಪಾಠವನ್ನು ಪಕ್ಕಕ್ಕೆ ತಳ್ಳಿ ಅನ್ಯಪ್ರತಿಯ ಪಾಠವನ್ನು ಶುದ್ಧವೆಂದು ಅಂಗೀಕರಿಸಬಹುದು. ಸಂಪಾದಕರು ಸಂಪಾದನ ಕಾರ್ಯದಲ್ಲಿ ಪರಿಣತರು. ಇದೇ ಏಳನೆಯ ಪುಟದ ಮೊದಲನೆಯ ಸಾಲಿನಲ್ಲೇ ಕ ಖ ಗ ಪ್ರತಿಗಳ 'ಕಾನನ' ಪಾಠವನ್ನು ಕೆಳಗೆ ತಳ್ಳಿ ಅನ್ಯಪ್ರತಿಗಳ 'ಮಟವ್ಯಾಂ' ಎಂಬ ಪಾಠವನ್ನು ಒಪ್ಪಿದ್ದಾರೆ. ಈ ಹಿನ್ನೆಲೆಯಲ್ಲಿ ಮೇಲಿನ ಪಾಠದ ಚರ್ಚೆಗೆ ತೊಡಗೋಣ.

'ಪಡಿಗಹಮುಚ್ಚಂ ಠಾಣಮೆಂದೀನೊಂಬತ್ತು' ಎಂಬಲ್ಲಿ ಒಂಬತ್ತು ಇವೆಯೆ ಎಂಬುದನ್ನು ನೋಡಬೇಕು. ಇದು ನವವಿಧ ಪುಣ್ಯವನ್ನು ಹೇಳುವ ಹೇಳಿಕೆ. ಪಡಿಗಹಂ (-ಪ್ರತಿಗ್ರಹಂ), ಉಚ್ಚಂಠಾಣಂ (-ಉಚ್ಚಸ್ಥಾನಂ)—ಎಂಬ ಎರಡನ್ನು ಮಾತ್ರ ಇಲ್ಲಿ ಹೇಳಿದಂತಾಯಿತು. ಆದರೆ 'ಎಂದೀನೊಂಬತ್ತು ತೆಱದಿಂದಂ ಪುಣ್ಯಮಂ ಕೈಕೊಂಡು' ಎಂದು ಅದರ ಮುಂದೆಯೇ ಬಂದು ಮಾತುಗಳು ಪೋಣಿಸಿದಂತೆ ಹೊಂದಿಕೊಂಡಿರುವುದರಿಂದ, ಇನ್ನು ಏಳರ ಹೇಳಿಕೆಯಲ್ಲಿರುವುದ ರಿಂದ ವಾಕ್ಯದ ಅನ್ವಯದಲ್ಲಿ ಚ್ಯುತಿಯುಂಟಾಗಿದೆ. ವಡ್ಡಾ.ಕಾರನ ಮನೋಧರ್ಮ ತಿಳಿದವರಿಗೆ ಇಲ್ಲಿ ತಡವರಿಸಿರುವುದು ತಟ್ಟನೆ ತಿಳಿಯುತ್ತದೆ. ಸಂಸ್ಕೃತ ಅಥವಾ ಪ್ರಾಕೃತ ಶ್ಲೋಕ—ಗಾಹೆಗಳನ್ನು ತುಂಡುತುಂಡಾಗಿ ವಡ್ಡಾ.ಕಾರ ಉದಾಹರಿಸುವು ದುಂಟೆಂಬುದು ನಿಜ. ಉದಾಹರಣೆ:

(ಅ) ಮಿಸ್ಸೇಣ ಮಾಣುಸತ್ತಮೆಂಬುದು ಪುಣ್ಯಪಾಪಂಗಳೆರಡುಮಂ ನೆಗೞ್ವರ್ ಮನುಷ್ಯ ಗತಿಯೊಳ್ ಪುಟ್ಟಿ. . . . ೯೭.

(ಆ) ಗಮ್ಮಇ ಧಮ್ಮೇಣ ದೇವಳೋಯಮ್ಮಿ ಎಂಬುದುಂ ಕೇವಳಮೆ ಧರ್ಮಂಗೆಯ್ದುವರ್ ಸೌಧರ್ಮ . . . (ಅದೇ).

(ಇ) ದೊಣ್ಣಂಪಿ ಖಯೇಣ ಣೆವ್ವಾಣಂ ಎಂದು ತಪದಿಂದಂ ಶುಭಾಶುಭ ಕರ್ಮಮೆಂದಿರ್ತೆರದ ಕರ್ಮದ ಕೇಡಿನಿಂದಂ ಮೋಕ್ಷಮನೆಯ್ದುವರ್, ಪುಟ ೯೮.

(ಈ) ಛಟ್ಠಟ್ಠಮ ದಸಮ ದುವಾಳ ಸಾಷ್ಟೋಪವಾಸ ಪಕ್ಷೋಪವಾಸ ಮಾಸೋಪವಾಸಂಗಳಂ ಮಾಡುತ್ತಂ, ಪುಟ ೪೫.

ಇತ್ಯಾದಿಯಾಗಿ ಇನ್ನೂ ನಾಲ್ಕೈದು ಉದಾಹರಣೆ ಕೊಡಬಹುದು. ಸಾರಾಂಶ ವಿಷ್ಟೆ: ಮೇಲಿನ ಎಲ್ಲ ಪ್ರಾಕೃತ ಗಾಹೆಗಳ ತುಣುಕುಗಳನ್ನು ಬಳಸಿದಾಗಲೂ ಆಯಾ ಭಾಗದಲ್ಲಿರುವ ಅರ್ಥವನ್ನು ಅದರ ಮುಂದಿನ ಮಾತುಗಳು ಅಲ್ಲಲ್ಲೇ ಸ್ಪಷ್ಟ ವಾಗಿ ತಿಳಿಸಿಕೊಟ್ಟಿವೆ. ಆದರೆ ಏಳನೆಯ ಪುಟದಲ್ಲಿ ಬರುವ ಪಡಿಗಹಮುಚ್ಚಂ ಠಾಣಂ ಎಂಬುದರಲ್ಲಿ ಅಂಥ ಅರ್ಥ ಸ್ಫುಟತೆಯಿಲ್ಲ, ಅದು ಇನ್ನೂ ಏನನ್ನೊ ಬಯಸುತ್ತದೆ.

ಎರಡನೆಯದಾಗಿ ಗಾಹೆಯ ಕಾಲುಭಾಗವನ್ನು ಗದ್ಯದ ಮಾತುಗಳೊಳಗೇ ಕೋದು ಕೊಡುವಾಗ 'ಎಂದಿಂತು', 'ಎಂದು'-ಎಂಬುದನ್ನು ಸೇರಿಸುತ್ತಾನೆ, ಇಲ್ಲವೇ ಕನ್ನಡ ಮಾತಿನೊಳಗೇ ಹೆಣೆದೇ ಬಿಡುತ್ತಾನೆ. ಆದರೆ ಪಡಿಗಹಮುಚ್ಚಂ ಠಾಣಂ ಎಂಬುದರ ಜೊತೆಗೆ 'ಎಂದೀವೊಂಬತ್ತು' ಎಂಬ ಮಾತಿರುವುದನ್ನು ವಿಶೇಷ ಲಕ್ಷ್ಯವಿತ್ತು ನೋಡಬೇಕು. ಎಲ್ಲೆಲ್ಲಿ 'ಎಂದೀ'—ಎಂಬುದಾಗಿ ಬರುತ್ತದೊ ಅಲ್ಲೆಲ್ಲ ಅದಕ್ಕೆ ಪೂರ್ವದಲ್ಲಿ ಸಂಸ್ಕೃತ ಅಥವಾ ಪ್ರಾಕೃತ ಪದ್ಯವನ್ನು ಪೂರ್ತಿ ಉದಾಹರಿಸಿರುತ್ತಾನೆ. ಇದಕ್ಕೆ ವಡ್ಡಾ.ಯ ೩೨, ೪೮, ೫೮, ೬೭, ೬೮, ೮೪, ೮೮, ೯೬, ೧೦೯—ಮೊದಲಾದ ಪುಟಗಳಲ್ಲಿ ಉದಾಹರಣೆಗಳನ್ನು ನೋಡಬಹುದು. ಅದರಿಂದ ಪುಟ ಏಳರಲ್ಲಿಯೂ ನಾವು ಸಹಜವಾಗಿ ಪೂರ್ತಿ ಗಾಹೆಯನ್ನು ಮತ್ತು ಒಂಬತ್ತು ಪುಣ್ಯಗಳ ಹೆಸರಿರುವುದನ್ನು ನಿರೀಕ್ಷಿಸುತ್ತೇವೆ. ಆಗ ಅನ್ಯಪ್ರತಿಗಳ, ಪಾಠಾಂತರವಾಗಿ ಕೊಟ್ಟಿರುವ ಪೂರ್ತಿ ಗಾಹೆಯನ್ನೇ ವಡ್ಡಾ.ಕಾರನ ಧೋರಣೆ, ಶೈಲಿಯ ಧಾಟಿಗೆ ಅನುಗುಣವಾಗಿದೆಯೆಂದು ಅಂಗೀಕರಿಸುವುದು ಹೆಚ್ಚು ವಿಹಿತ ವಾಗಿರುವುದು ತಿಳಿದುಬರುತ್ತದೆ. ಈ ಪೂರ್ತಿ ಗಾಹೆಯನ್ನು ಸರಿಯಾದ ಪಾಠವೆಂದು ಸಂಪೂರ್ಣವಾಗಿ ಒಪ್ಪಿಕೊಳ್ಳುವ ಮೊದಲು, ಅದರಲ್ಲಿ ಒಂಬತ್ತೂ ಪುಣ್ಯಗಳ ಹೆಸರು ಗಳು ಇವೆಯೆ ಎಂಬುದನ್ನೂ ಮನವರಿಕೆ ಮಾಡಿಕೊಳ್ಳಬೇಕಾಗುತ್ತದೆ. ಅದರಂತೆ ಹೆಕ್ಕಿ ನೋಡಿದಾಗ ಆ ಪ್ರಾಕೃತ ಗಾಹೆಯಲ್ಲಿ ಕ್ರಮವಾಗಿ ಪ್ರತಿಗ್ರಹ, ಉಚ್ಚ ಸ್ಥಾನ, ಪಾದೋದಕ, ಅರ್ಚನ, ಪ್ರಣಾಮ, ಮನೋ (ಶುದ್ಧಿ), ವಚನ (ಶುದ್ಧಿ), ಕಾಯಶುದ್ಧಿ, ಏಷಣಾಶುದ್ಧಿ—ಎಂಬ ಣವ ವಿದಂ ಪುಣ್ಣಂ (ನವವಿಧಂ ಪುಣ್ಯಂ) —ಅಷ್ಟೂ ಇವೆ;—'ಎಂದೀವೊಂಬತ್ತು ತೆಱದಿಂದಂ ಪುಣ್ಯಮಂ . . .' ಎಂಬ ಶಬ್ದಗಳ ಬಳಕೆಗೆ ಸಾರ್ಥಕತೆ ಬಂದಿದೆ. ಈ ಎಲ್ಲ ಕಾರಣಗಳಿಂದಾಗಿ ವಡ್ಡಾ.ಯ ಪಾಠ ಹೀಗಿರಬೇಕಾಗುತ್ತದೆ; ಮತ್ತು ಪಾಠಾಂತರದಲ್ಲಿರುವ ಘ ಚ ಛ ಜ ಪ್ರತಿಗಳ ಪಾಠವನ್ನೇ ಅಂಗೀಕರಿಸಬೇಕಾಗುತ್ತದೆ:

". . . ಭೈಕ್ಷಕ್ಕೆಂದು . . . ಭಕ್ತಿಯಿಂದಂ ನಿಱಿಸಿ ಕಾಲಂ ಕರ್ಚಿ ಪಡಿಗಹ ಮುಚ್ಚಟ್ಠಾಣಂ ಪಾಯೋಯಕಮುಚ್ಚಣಂ ಚ ಪಣಮಂಚ ಮಣವಯಣ ಕಾಯ ಸುದ್ಧಿಂ ಯೇಸಣಸುದ್ದಿಂ ಚ ಣವವಿದಂ ಪುಣ್ಣಂ ‖ ಎಂದೀವೊಂಬತ್ತು ತೆಱದಿಂದಂ . . . ." ಈ ಗಾಹೆ ಚಾಮುಂಡರಾಯ ಪುರಾಣದಲ್ಲಿಯೂ ಪೂರ್ತಿಯಾಗಿ ಉದಾಹೃತವಾಗಿ, ಶ್ರೇಯಾಂಸನು ಆದಿತೀರ್ಥಂಕರರಿಗೆ 'ಕನಕ ಕಳಶದೊಳ್ ತೀವಿದ ಕಬ್ಬಿನರಸಮಂ ಪಾಣಿ ಪಾತ್ರದೊಳೆಱೆದು' ನವವಿಧ ಪುಣ್ಯಪುರಸ್ಸರನಾಗಿ ನಡೆದುಕೊಂಡನಂತೆ.

ಬಹಳ ಮುಖ್ಯವಾದ ಮಾತೊಂದಿದೆ, ಈ ಪ್ರಾಕೃತ ಗಾಹೆಯ ಸಂಬಂಧವಾಗಿ ಹೇಳಬೇಕಾದ್ದು. ಈ ಗಾಹೆಯ ಕಾಲುಭಾಗವೊ ಅಥವಾ ಪೂರ್ತಿ ಭಾಗವೊ, ಅಂತೂ ಈ ಗಾಹೆ ವಡ್ಡಾ.ಯ ಎಲ್ಲ ಪ್ರತಿಗಳಲ್ಲೂ ಇರುವುದು ನಿಶ್ಚಯವೆಂದಾಯಿತು.

ವಡ್ಡಾ.ಯಲ್ಲಿ ಉದಾಹೃತವಾಗಿರುವ ಈ ಗಾಹೆಯ ಆಕರ ಪುಣ್ಯವಶಾತ್ ಗೊತ್ತಾ
ಗಿದ್ದು, ಅದು ವಡ್ಡಾ.ಯ ಕಾಲ ನಿರ್ಧಾರಕ್ಕೆ ಹೊಸ ಬೆಳಕು ಹಾಯಿಸುವುದರ
ಜತೆಗೆ ಇನ್ನೊಂದು ತಿರುವು ಕೊಡಲಿದೆ. ೧೯೬೮ರಲ್ಲಿ ಪ್ರಕಟವಾದ ವಡ್ಡಾರಾಧನೆ
ಎಂಬ ನನ್ನ ಕಿಸೆ ಹೊತ್ತಗೆಯಲ್ಲಿ ಇದನ್ನು ವಡ್ಡಾ. ಮತ್ತು ಚಾವುಂಡರಾಯ
ಪುರಾಣಗಳಲ್ಲಿ ಸಿಗುವ ಒಂದು ಸಮಾನ ಗಾಹೆಯೆಂದು ಹೇಳಿದ್ದೇನೆ. ಜೂನ್
೧೯೭೦ರಲ್ಲಿ ಇಂಗ್ಲಿಷಿನಲ್ಲಿ ಪ್ರಕಟವಾದ 'ಚಾವುಂಡರಾಯ ಮತ್ತು ಆತನ ಹಿಂದಿನ
ಗ್ರಂಥಕರ್ತರು' ಎಂಬ ಲೇಖನದ ಕಡೆಯಲ್ಲಿ ಡಾ|| ಆ. ನೇ. ಉಪಾಧ್ಯೆ ಅಕಾರಾದಿ
ಯಾಗಿ ಕೊಟ್ಟಿರುವ, ಚಾವುಂಡರಾಯ ಉದಾಹೃತ ಕೆಲವು ಸಂಸ್ಕೃತ ಪ್ರಾಕೃತ
ಪದ್ಯಗಳಲ್ಲಿ ತಮಗೆ ಗೊತ್ತಿರುವಷ್ಟು ಪದ್ಯಗಳಿಗೆ ಆಕರವನ್ನು ಸೂಚಿಸಿದ್ದಾರೆ.
ಅದರಲ್ಲಿ ಈ ಪಡಿಗಹಮುಚ್ಚಟ್ಠಾಣಂ ಎಂಬುದು ವಸುನಂದಿಯ ಶ್ರಾವಕಾಚಾರಕ್ಕೆ
ಸೇರಿದ ೨೨೫ನೆಯ ಗಾಹೆಯೆಂದು ಡಾ|| ಆ. ನೇ. ಉಪಾಧ್ಯೆ ತಿಳಿಸಿ ಉಪಕಾರ
ಮಾಡಿದ್ದಾರೆ. ನಾನು ಪುಸ್ತಕ ಬರೆದಾಗ ಇದು ನನ್ನ ಗಮನಕ್ಕೆ ಬರಲಿಲ್ಲ—ನನ್ನ
ಪುಸ್ತಕದಲ್ಲಿ ಇದರ ಸಂಬಂಧವಾಗಿ ಹೇಳಿರುವುದು ಅವರ ಗಮನಕ್ಕೂ ಬರಲಿಲ್ಲ.
ಈಗ ಡಾ|| ಆ. ನೇ. ಉಪಾಧ್ಯೆಯವರಿಲ್ಲ, ಆದರೆ ಈ ಕ್ಷೇತ್ರದಲ್ಲಿ ಕೆಲಸ ಮಾಡುವ
ಇತರ ವಿದ್ವಾಂಸರಿಗೂ ಈ ಸಮಾನಗಾಹೆ ಮತ್ತು ಇದರ ಆಕರದತ್ತ ಗಮನ
ಬೀಳಲಿಲ್ಲ. ಆಕಸ್ಮಾತ್ತಾಗಿ ಇತ್ತೀಚೆಗೆ ಇದು ಮತ್ತೆ ನನ್ನ ಗಮನ ಸೆಳೆದದ್ದು ಈ
ಲೇಖನಕ್ಕೆ ಕಾರಣವಾಯಿತು. ವಸುನಂದಿ ಮತ್ತು ಆತನ ಶ್ರಾವಕಾಚಾರದ ಕಾಲ
ವಿಚಾರ ತಿಳಿದರೆ ಕನ್ನಡ ವಡ್ಡಾ.ಯ ಕಾಲ ಸೂಚನೆಗೂ ಸಹಾಯವಾಗಲಿದೆ;
ಆದರಿಂದ ಆ ಬಗ್ಗೆ ಸಂಗ್ರಹವಾಗಿ ವಿವರ ಕೊಡುತ್ತೇನೆ.

ವಸುನಂದಿಯ ಶ್ರಾವಕಾಚಾರದ ಹೆಸರು ಉಪಾಸಕಾಧ್ಯಯನ. ಈ ಉಪಾಸ
ಕಾಧ್ಯಯನಕ್ಕೆ ಇರುವ ಇನ್ನೊಂದು ಹೆಸರು ಶ್ರಾವಕಾಚಾರ. ಇದರಲ್ಲಿ ೫೪೬
ಪ್ರಾಕೃತ ಗಾಹೆಗಳಿವೆ. ವಸುನಂದಿಯು ತನ್ನ ಗುರು ನೇಮಿಚಂದ್ರರ ಪ್ರಸಾದದಿಂದ
ಆಚಾರ್ಯ ಪರಂಪರಾಗತವಾಗಿ ಬಂದ ಉಪಾಸಕಾಧ್ಯಯನವನ್ನು ವಾತ್ಸಲ್ಯ ಮತ್ತು
ಆದರ ಭಾವದಿಂದ ಭವ್ಯರಿಗೋಸ್ಕರವಾಗಿ ಬರೆದಿರುವುದಾಗಿ ತಿಳಿಸಿದ್ದಾನೆ. ಉಪಾಸ
ಕಾಧ್ಯಯನದ ೫೪೬ ಗಾಹೆಗಳಲ್ಲಿ ೨೨೫ನೆಯ ಗಾಹೆಯೇ ವಡ್ಡಾ.ಯಲ್ಲಿ ಉದಾ
ಹೃತವಾಗಿರುವ ಪಡಿಗಹಮುಚ್ಚಟ್ಠಾಣಂ ಎಂಬುದು. ವಸುನಂದಿಯ ಕಾಲ ಖಚಿತ
ವಾಗಿಲ್ಲ. ೧೨೪೩ರಲ್ಲಿದ್ದ ಆಶಾಧರಸೂರಿಯು ಸಾಗಾರಧರ್ಮಾಮೃತದಲ್ಲಿ ವಸು
ನಂದಿಯನ್ನು ಹೆಸರಿಸಿರುವುದರಿಂದ ಡಾ|| ಹೀರಾಲಾಲ್ ಜೈನರು, ವಸುನಂದಿ
ಬಹುವಾಗಿ ಹನ್ನೊಂದು ಅಥವಾ ಹನ್ನೆರಡನೆಯ ಶತಮಾನದವನೆಂದು ಆಧಾರ
ಗಳಿಂದ ಹೇಳಿದ್ದಾರೆ. (ಡಾ|| ಹೀರಾಲಾಲ್ ಜೈನ, ಭಾರತೀಯ ಸಂಸ್ಕೃತಿಗೆ ಜೈನ
ಧರ್ಮದ ಕೊಡುಗೆ, ೧೯೭೧; ಕನ್ನಡ ಅನುವಾದ : ಮಿರ್ಜಿ ಅಣ್ಣಾರಾಯ, ಪುಟ
೧೪೩).. ಆದರಿಂದಾಗಿ ವಸುನಂದಿಯ ಗಾಹೆಯನ್ನು ಉದಾಹರಿಸಿರುವ ವಡ್ಡಾ.ಯ

ಕಾಲವು ಹನ್ನೊಂದು ಇಲ್ಲವೇ ಹನ್ನೆರಡನೆಯ ಶತಮಾನದ ಕೃತಿಯಾಗಬೇಕಾಗುತ್ತದೆ.

ಆದರೆ ಇಲ್ಲಿ ಇನ್ನೆರಡು ಸಂಗತಿಗಳಿವೆ. ಇದೇ ಗಾಹೆ ೯೭೮ರಲ್ಲಿ ಬರೆದ ಚಾಮುಂಡರಾಯ ಪುರಾಣದಲ್ಲೂ ಉದಾಹೃತವಾಗಿದೆ (ಹಂಪನಾ, ವಡ್ಡಾರಾಧನೆ, ೧೯೬೮, ಎರಡನೆಯ ಮುದ್ರಣ, ೧೯೭೩). ಹನ್ನೊಂದು ಹನ್ನೆರಡನೆಯ ಶತಮಾನದ ವಸುನಂದಿ ಗಾಹೆ, ಹತ್ತನೆಯ ಶತಮಾನದ ಕೃತಿಯಲ್ಲಿ ಹೇಗೆ ಬಂತು ಎಂಬ ಸಂಶಯ ಬರುತ್ತದೆ. ವಾಸ್ತವವಾಗಿ ವಸುನಂದಿಯ ಉಪಾಸಕಾಧ್ಯಯನದಲ್ಲಿ ಅದಕ್ಕೂ ಹಿಂದಿನ ಕಾಲದ ಗಾಹೆಗಳು ಸೇರ್ಪಡೆಯಾಗಿವೆ. ವಸುನಂದಿಯ ಉಪಾಸಕಾಧ್ಯಯನದಲ್ಲಿ ೯೩೩ರ ದೇವಸೇನಕೃತ ಭಾವಸಂಗ್ರಹದಿಂದ ಎತ್ತಿಕೊಂಡ ಅನೇಕ ಗಾಹೆಗಳಿವೆಯೆಂದು ಡಾ|| ಹೀರಾಲಾಲ್ ಜೈನರು ತಿಳಿಸಿದ್ದಾರೆ(ಪೂರ್ವೋಕ್ತ, ಪುಟ ೧೩೮). ಆದರಿಂದ ವಡ್ಡಾ.ಕಾರ ಮತ್ತು ಚಾಮುಂಡರಾಯ ಇದನ್ನು ದೇವಸೇನರಿಂದಲೇ ಉದ್ಧರಿಸಿರಬಹುದು. ವಸುನಂದಿಯಿಂದಲೇ ತೆಗೆದುಕೊಂಡಿರುವುದಾದರೆ, ಆಗ ವಸುನಂದಿಯ ಕಾಲ ೯೭೮ಕ್ಕಿಂತ ಹಿಂದೆ ಮತ್ತು ೯೩೩ಕ್ಕಿಂತ ಅನಂತರ ಎಂದಾಗುತ್ತದೆ. ಇದು ಕೂಡ ಹೆಚ್ಚು ಸಂಭವನೀಯವೆಂದೇ ನನಗೆ ತೋರುತ್ತದೆ. ಅಂದರೆ, ವಸುನಂದಿಯ ಕಾಲ ನಿರ್ಧಾರಕ್ಕೆ ಚಾಮುಂಡರಾಯನ ಕೊಡುಗೆಯಾಗಿ ಇದನ್ನು ಪರಿಗಣಿಸಬೇಕಾಗುತ್ತದೆ. ಈ ವಿಚಾರವಾಗಿ ಮತ್ತಷ್ಟು ಸಂಶೋಧನೆ ಮುಂದುವರಿಯಬೇಕಾಗಿದೆ.

ಇವೆಲ್ಲಾ ಏನೇ ಇದ್ದರೂ, ವಡ್ಡಾ.ಯ ಕಾಲ ೯೩೩ ಕ್ಕಿಂತ ಹಿಂದೆ ಹೋಗುವುದು ಮತ್ತೂ ಕಷ್ಟವಿದೆಯೆಂದು ಸ್ಪಷ್ಟವಾಗುತ್ತದೆ. ಈಗಾಗಲೇ ಡಾ|| ಆ. ನೇ. ಉಪಾಧ್ಯೆಯವರು ಸೂಚಿಸಿರುವಂತೆ ವಡ್ಡಾ.ಕಾರ ೯೩೩ರಲ್ಲಿದ್ದ ದೇವಸೇನನ ನಯಚಕ್ರದಿಂದ (ನಯಲಕ್ಷಣ) ಮಜ್ಝು ಸಹಾವಂ ಣಾಣಂ ಎಂಬ ಗಾಹೆ ತೆಗೆದುಕೊಂಡಿರುವುದನ್ನು ತೋರಿಸಿಕೊಟ್ಟಿದ್ದಾರೆ. ಈಗ ಅದರ ಜತೆಗೆ ಪಡಿಗಹಮುಚ್ಚಟ್ಠಾಣಂ ಎಂಬ ಗಾಹೆಯೂ ಸೇರಿ, ಅವರ ಹೇಳಿಕೆ ಮತ್ತಷ್ಟು ಪುಷ್ಟಿಗೊಂಡಂತಾಯಿತು (ದೇವಸೇನನನ್ನು ಕುರಿತು ಹೆಚ್ಚಿನ ಮಾಹಿತಿಗಾಗಿ ನೋಡಿ : ದೇವಸೇನಗಣಿ, ಹಂಪನಾ ಲೇಖನ).

ಈ ಗಾಹೆಗೆ ಸಂಬಂಧಿಸಿದಂತೆ ವಿದ್ವಾಂಸರ ಗಮನಕ್ಕೆ ತರಬೇಕಾದ ಮತ್ತೊಂದು ಸಂಗತಿಯಿದೆ. ಅದೆಂದರೆ, ಇದೇ ಗಾಹೆ ನೋಂಪಿಯ ಕಥೆಯೊಂದರಲ್ಲೂ ಉದಾಹೃತವಾಗಿರುವುದು (ಹಂಪನಾ, ಕೆಲವು ನೋಂಪಿಯ ಕತೆಗಳು, ೧೯೭೭, ಪುಟ XXXV).

ವಡ್ಡಾ.ಯ ಆರಂಭದಲ್ಲಿ ಬರುವ ಮೂರು ಪ್ರಾಕೃತ ಪದ್ಯಗಳ ಆಕರಕ್ಕೆ ಸಂಬಂಧಿಸಿದಂತೆ ಉಂಟಾಗಿರುವ ತಪ್ಪುಕಲ್ಪನೆಯನ್ನು ನಿವಾರಿಸುವ ಉದ್ದೇಶದಿಂದ

ಅತಿ ಸಂಗ್ರಹವಾಗಿ ಇಲ್ಲಿ ಕೆಲವು ಮಾತು ಹೇಳಬೇಕಾದ್ದಿದೆ. ಮೂಲ ಆಕರ ಗ್ರಂಥ ದೊಡನೆ ಹೋಲಿಸಿ ನೋಡದೆ ಒಬ್ಬರು ಹೇಳಿದ್ದಾರೆಂದು ಅದನ್ನೇ ಉದ್ಧರಿಸುತ್ತಾ ಹೊರಡುವುದು ಕೆಲವು ಸಲ ಎಷ್ಟು ತಪ್ಪುಗಳಿಗೆ ಕಾರಣವಾಗುತ್ತದೆಂಬುದಕ್ಕೆ ವಡ್ಡಾ. ಸಂಬಂಧವಾಗಿ ಇನ್ನೂ ರೂಢಿಯಲ್ಲಿರುವ ಈ ತಪ್ಪು ಒಳ್ಳೆಯ ಉದಾಹರಣೆಯಾಗಿದೆ. ವಡ್ಡಾ.ಯ ಘ ಚ ಛ ಹಸ್ತಪ್ರತಿಗಳಲ್ಲಿ 'ತಿಳೋಯ ಸಬ್ಬ ಜೀವಾಣಂ' ಎಂಬ ಗಾಹೆಯೂ, ಚ ಪ್ರತಿಯಲ್ಲಿ ಇದಕ್ಕಿಂತ ಹಿಂದೆ ಇನ್ನೂ ಎರಡು ಗಾಹೆಗಳು ಇವೆ ಯಾದರೂ ಆ ಭಾಗ ತ್ರುಟಿತವಾಗಿರುವುದಾಗಿಯೂ ಜ ಪ್ರತಿಯಲ್ಲಿ ೧. 'ಯಿಂದ ಸಯ ವಂದಿಯಾಣಂ . . .', ಹಾಗೂ ೨. 'ಯೇಸ ಸುರಾಸುರ . . . .' ಎಂಬ ಎರಡು ಗಾಹೆಗಳೂ ಗ್ರಂಥಾರಂಭದಲ್ಲಿ ಇವೆ. ಡಾ|| ಆ. ನೇ. ಉಪಾಧ್ಯೆಯವರು ಈ ಗಾಹೆಗಳಲ್ಲಿ ಮೊದಲನೆಯ ಎರಡು ಗಾಹೆಗಳು ಕ್ರಮವಾಗಿ 'ಪ್ರವಚನ ಸಾರ' ಮತ್ತು 'ಪಂಚಾಸ್ತಿಕಾಯ' ಎಂಬ ಪ್ರಾಕೃತಗ್ರಂಥಗಳ (ಕುಂದಕುಂದಾಚಾರ್ಯಕೃತ) ಆರಂಭದ ಮಂಗಳ ಪದ್ಯಗಳೆಂದು ತಿಳಿಸಿದ್ದಾರೆ. ಅದನ್ನು ಉದಾಹರಿಸಿ ವಡ್ಡಾ.ಯ ಸಂಪಾದಕರು ಹೀಗೆ ಬರೆದಿದ್ದಾರೆ:

೧. ತಿಳೋಯ ಸಬ್ಬಜೀವಾಣಂ—(ಮೂಲ ಆಕರ) ಪಂಚಾಸ್ತಿಕಾಯ
೨. ಯಿಂದ ಸಯ ವಂದಿಯಾಣಂ—ಪ್ರವಚನಸಾರ
೩. ಯೇಸ ಸುರಾಸುರ—ಆಕರ ಗೊತ್ತಿಲ್ಲ

(ವಡ್ಡಾ. ೧೯೭೦ರ ಆವೃತ್ತಿ, ಪು. ೩೩೩).

ಡಾ|| ಬಿ. ಕೆ. ಕಡಬಡಿಯವರೂ (ವಡ್ಡಾರಾಧನೆ: ಎ ಸ್ಟಡಿ, ೧೯೭೪, ಪು. ೧೧೨, ಮತ್ತು ೨೧೪), ಡಾ|| ಎಂ. ಎಂ. ಕಲಬುರ್ಗಿಯವರೂ (ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ, ೧೯೭೩, ಪು. ೨೪೨ ಮತ್ತು ೨೪೪) ಇತರರೂ ಹೀಗೆಯೇ ಬರೆಯುತ್ತಿದ್ದಾರೆ. ತಪ್ಪುಗಳು ಒಬ್ಬರಿಂದೊಬ್ಬರಿಗೆ ಹಾಗೆಯೇ ಉಳಿದು ಬರುತ್ತ ವೆಂಬುದಕ್ಕೆ ಇದು ಸಾಕ್ಷಿಯಾಗಿದೆ. ಒಬ್ಬರಾದರೂ ಒಮ್ಮೆಯಾದರೂ ಮೂಲ ಪ್ರಾಕೃತ ಗ್ರಂಥಗಳನ್ನು ತೆಗೆದು ನೋಡಿದ್ದರೆ ಈ ರೀತಿ ಎಡವದೆ ಇದನ್ನು ಸರಿಪಡಿಸ ಬಹುದಿತ್ತು. ಈ ತಪ್ಪು ಮತ್ತೆ ಮುಂದುವರಿಯಲು ಬಿಡಬಾರದೆಂದು ನಾನು ಇದನ್ನು ಬಲ್ಲಿದರ ಗಮನಕ್ಕೆ ತರುತ್ತಿದ್ದೇನೆ.

ವಾಸ್ತವವಾಗಿರುವ ಸಂಗತಿಯಿಷ್ಟು: ವಡ್ಡಾ.ಯ ಒಂದು ಗುಂಪಿನ ಹಸ್ತ ಪ್ರತಿಗಳ ಆರಂಭದಲ್ಲಿ ಮೂರು ಪ್ರಾಕೃತ ಗಾಹೆಗಳಿವೆ:

೧. ತಿಳೋಯ ಸಬ್ಬ ಜೀವಾಣಂ . . . .
೨. ಯಿಂದ ಸಯ ವಂದಿಯಾಣಂ . . . .
೩. ಯೇಸ ಸುರಾಸುರ ಮಣುಸಿಂದ . . . .

ಇವುಗಳಲ್ಲಿ (ಮೊದಲ) ಎರಡು ಗಾಹೆಗಳು ಕುಂದಕುಂದ ಆಚಾರ್ಯರ ಪಂಚಾಸ್ತಿಕಾಯ ಮತ್ತು ಪ್ರವಚನಸಾರ ಎಂಬ ಎರಡು ಕೃತಿಗಳ ಪ್ರಾರಂಭದ ಪ್ರಾರ್ಥನಾ ಪದ್ಯಗಳೆಂದು ಡಾ|| ಉಪಾಧ್ಯೆ ಹೇಳಿದರು. ವಡ್ಡಾ. ಸಂಪಾದಕರು ಮತ್ತು ಇತರ ವಿದ್ವಾಂಸರು ಇದನ್ನು ಮೂಲದೊಡನೆ ಹೋಲಿಸದೆ, ಉಪಾಧ್ಯೆಯವರು ಹೇಳಿದ್ದು ಯಾವ ಎರಡು ಗಾಹೆಗಳಿಗೆ-ಎಂಬುದನ್ನು ಮನವರಿಕೆ ಮಾಡಿಕೊಳ್ಳದೆ, 'ತಿಳೋಯ ಸಬ್ಬ ಜೀವಾಣಂ' ಮತ್ತು 'ಯಿಂದ ಸಯ ವಂದಿಯಾಣಂ' ಎಂಬೆರಡು ಗಾಹೆಗಳಿಗೆ ಅನ್ವಯಿಸಿಕೊಂಡು ಬಿಟ್ಟರು. ಅದೇ ತಪ್ಪಿಗೆ ಕಾರಣವಾದದ್ದು. ಡಾ|| ಉಪಾಧ್ಯೆ 'ಆರಂಭದ ಎರಡು ಗಾಹೆಗಳು' ಎಂದು ಹೇಳಿದ್ದು ಜ ಪ್ರತಿಯಲ್ಲಿರುವ 'ಯಿಂದ ಸಯ ವಂದಿಯಾಣಂ' ಮತ್ತು 'ಯೇಸ ಸುರಾಸುರ . .' ಎಂಬ ಎರಡು ಗಾಹೆಗಳಿಗೆ ಅನ್ವಯಿಸಿಯೇ ಹೊರತು 'ತಿಳೋಯ ಸಬ್ಬ ಜೀವಾಣಂ' ಎಂಬ ಗಾಹೆಯನ್ನು ಸೇರಿಸಿ ಅಲ್ಲ; ಇದರಂತೆ ಅನ್ವಯಿಸಿಕೊಳ್ಳಬೇಕು, ಆಗ ವಿವರಣೆ ಸರಿಹೋಗುತ್ತದೆ. ನಾನು ಮೂಲ ಪ್ರಾಕೃತ ಕೃತಿಗಳೊಡನೆ ಹೋಲಿಸಿ ಅವೆರಡೂ ಗಾಹೆಗಳ ವಿವರ ಮತ್ತು ಪಾಠ ಕೊಡುತ್ತಿದ್ದೇನೆ:

೧. ಇ(ಯಿ)ಂದ ಸದ(ಯ) ವಂದಿಯಾಣಂ ತಿಹು ಅ(ವ)ಣಹಿದ(ಯ)
ಮಹು(ಧು)ರ ವಿಸದ ವಕ್ಕಾಣಂ
ಅಂತಾತೀ(ತಿ)ದು(ಧ) ಗುಣಾಣಂ ಣಮೋ ಜಿಣಾಣಂ ಜಿದ ಭವಾಣಂ ||೧
—ಕುಂದಕುಂದಾಚಾರ್ಯ, ಪಂಚಾಸ್ತಿಕಾಯ, |

೨. ಏ(ಯೇ)ಸ ಸುರಾಸುರ ಮಣುಸಿಂದ ವಂದಿದ(ಯ)ಂ ಧೋದಘಾಇ(ಯಿ)
ಕಮ್ಮಮಲಂ (ಕಂಮಮಳಂ)
ಪಣಮಾಮಿ ವಡ್ಢಮಾಣಂ ತಿತ್ಥಂ ಧಮ್ಮಸ್ಸ ಕತ್ತಾರಂ ||೧
—ಕುಂದಕುಂದ ಆಚಾರ್ಯ, ಪ್ರವಚನಸಾರ, |

ಈಗ ಉಳಿಯುವ ಪ್ರಶ್ನೆ: ಹಾಗಾದರೆ 'ತಿಳೋಯ ಸಬ್ಬ ಜೀವಾಣಂ' ಎಂಬ ಗಾಹೆಯ ಆಕರ ಯಾವುದೆಂಬುದು. ಡಾ|| ಉಪಾಧ್ಯೆಯವರಾಗಲಿ, ಇತರರಾಗಲಿ ಅದನ್ನು ಹೇಳಿಲ್ಲ; ಗೊತ್ತಿದ್ದರೆ ತಪ್ಪದೆ ತಿಳಿಸಿ ಉಪಕರಿಸುತ್ತಿದ್ದರು. ನನಗೆ ಈ ಪ್ರಾಕೃತ ಗಾಹೆಯ ಆಕರ ಗೊತ್ತಿದೆ. ಅದನ್ನು ಬಲ್ಲಿದರ ಕಣ್ಣಳತೆಯಲ್ಲಿರಲೆಂದು ಇಲ್ಲಿ ತಿಳಿಸುತ್ತಿದ್ದೇನೆ:

ತಿಳೊ(ಲೋ)ಯ ಸವ್ವ (ಬ್ಬ) ಜೀವಾಣಂ ಹಿಯ(ದ)ಂ
ಧಮ್ಮೋವದೇಸಿಣಂ
ವಡ್ಢಮಾಣಂ ಮಹಾವೀರಂ ವಂದಿತ್ತಾ ಸವ್ವ(ಬ್ಬ)ವೇ ಇ(ದಿ)ಣಂ ||

ಇದರ ಸಂಸ್ಕೃತ ಛಾಯೆ—

ತ್ರಿಲೋಕ ಸರ್ವ ಜೀವಾನಾಂ ಹಿತಂ ಧರ್ಮೋಪದೇಶಿನಂ
ವರ್ಧಮಾನಂ ಮಹಾವೀರಂ ವಂದಿತ್ವಾ ಸರ್ವ ವೇದಿನಂ ||

ಈ ಗಾಹೆ ಕುಂದಕುಂದ ಆಚಾರ್ಯರ ಚಾರಿತ್ರ ಭಕ್ತಿಗೆ ಸೇರಿದ ಪ್ರಥಮ ಮಂಗಳ ಪದ್ಯವಾಗಿದೆ.

ವಿದ್ವಾಂಸರು ಈ ತಿದ್ದುಪಡಿಗಳನ್ನು ದಯೆಯಿಟ್ಟು ಗಮನಿಸಬೇಕೆಂಬುದು ನನ್ನ ಅರಿಕೆ.

# ಭಕ್ತಿ ಬಿನ್ನಹ ದಂಡಕ

## ವೈಲಾರದ ಬಸವಲಿಂಗ (?)

---

(ಸಂ.) ಎಸ್. ಶಿವಣ್ಣ

ದಂಡಕ ಪ್ರಕಾರಕ್ಕೆ ಸೇರಿದ ಭಕ್ತಿ ಬಿನ್ನಹ ದಂಡಕದ ಕರ್ತೃ ತನ್ನ ಹೆಸರನ್ನು ನೇರವಾಗಿ ತಿಳಿಸಿಲ್ಲ. ಕೃತಿಯ ಆದಿಯ ಶ್ಲೋಕದಲ್ಲಿ ಹಾಗೂ ಅಂತ್ಯದಲ್ಲಿ 'ಚೆನ್ನವೀರೇಶ'ನ ಉಲ್ಲೇಖವಿದೆ. ಕನ್ನಡ ಸಾಹಿತ್ಯದಲ್ಲಿ ಚೆನ್ನವೀರ, ಚೆನ್ನವೀರೇಶ ಅಂಕಿತಗಳಿಂದ ಕೆಲವಾರು ಕೃತಿಗಳನ್ನು[1] ರಚಿಸಿರುವ ಮೈಲಾರ ಬಸವಲಿಂಗ (ಸು. ೧೮೦೦)ರೆ ಈ ದಂಡಕವನ್ನು ರಚಿಸಿರಬಹುದಾದ ಸಾಧ್ಯತೆಯುಂಟು. ಅಲ್ಲದೆ ಕೃತಿಯ ವಸ್ತು ಸಹ ಬಸವಲಿಂಗ ಶರಣರ ಮನೋಧರ್ಮಕ್ಕೆ ಅನುಗುಣವಾಗಿದೆ.

ಪ್ರಸ್ತುತ ಕೃತಿಯನ್ನು 'ವಚನವಾಙ್ಮಯ ಭಾಂಡಾರ' (ಕರ್ನಾಟಕ ವಿಶ್ವ ವಿದ್ಯಾಲಯ, ಧಾರವಾಡ)ದ ಸಂಗ್ರಹದಲ್ಲಿಯ ಕಾಗದದ ಪ್ರತಿಯನ್ನು ಆಧರಿಸಿ ಅಚ್ಚಿಗೆ ಸಿದ್ಧಪಡಿಸಿದೆ. ಕೃತಿಯ ಕೆಲವೆಡೆ ಛಂದೋದೋಷಗಳಿವೆ. ಕೃತಿಯನ್ನು ಬಳಸಿಕೊಳ್ಳಲು ಅನುಮತಿಯಿತ್ತ ಅಧಿಕಾರಿಗಳಿಗೆ ವಂದನೆಗಳು.

---

1 i) ಗುರುಕರುಣ ತ್ರಿಪದಿ
ii) ನಿರಾಭಾರಿ ವೀರಶೈವ ಷಟ್ಸ್ಥಲ ಸಿದ್ಧಾಂತ (ವಾರ್ಧಕ ಷಟ್ಪದಿ)
iii) ಲಿಂಗಪೂಜಾವಿಧಾನ (ಕಂದ)
iv) ಶಿವಾನುಭವ ದರ್ಪಣ (ಹಾಡು)

## ಭಕ್ತಿ ಬಿನ್ನಹ ದಂಡಕ

ಜಯ ಜಂಗಮ ಲಿಂಗೇಶ| ಜಯಲಿಂಗ ಕಳೇವರ
ಜಯ ಶ್ರೀ ಚೆನ್ನವೀರೇಶ| ಜಯ ಕಾರುಣ್ಯ ಮೂರ್ತಿಯೆ

ಜಯ ಜಯ ಗುರುದೇವ ಶ್ರೀ ವೀರಶೈವಾಬ್ಧಿ ಸಂಪರ್ಧಿತುಬ್ಯನ್ಮಹಾ ಜ್ಞಾನ ಚಂದ್ರಗಣೇಂದ್ರಾಮದೀಯೈಕ ಸದ್ಭಕ್ತಿ ವಿಜ್ಞಾಪನಂ ಪ್ರೀತಿಯಿಂ ಮನ್ನಿಸೈ ಲಾಲಿಸೈ ಹೀನ ಸಂಸಾರ ಸಂಯೋಗದಿಂ ಬುದ್ಧಿಯಂ ನೀಗಿ ದುರ್ಮಾಯ ಪಾಶಂಗಳೊಳ್ಬಿದ್ದು ಸನ್ಮಾರ್ಗಮಂ ಕಳ್ದು ಜಾಡ್ಯತ್ವದುತ್ಪತ್ತಿನಾಶತ್ವದೊಳಾಳ್ದಗಣ್ಯಾಂಡ ಜಸ್ವೇದಜೋದ್ಭಿಜ ಜೀರ್ಣಾಯುಜಾ ವ್ರಾತಮೊಂದೊಂದರೋಳೀ ಕವಿಂಶನ್ಮಹಾ ಲಕ್ಷಸಂಖ್ಯ ಪ್ರಮಾಣಂಗಳೊಳ್ಬಿರ್ದು ಮೂದೇವತಾರಾಧ್ಯ ನಿಮ್ಮಂಘ್ರಿಯಂ ಕಾಣದಾವಾಗ ಕಂಗೆಟ್ಟು ಶ್ರೀ ಶೈವ ಸಾಬ್ರಾಜ್ಯದೈಶ್ವರ್ಯಮಂ ಬಿಟ್ಟುಯ್ಯೆ ತಾರದಾಯಾಸ ಜನ್ಮಂಗಳೊಳ್ಪಂದು ತಿನ್ಬಾರದಾಹಾರಮಂ ತಿಂದು ತನ್ಮಧ್ಯದೊಳ್ತೋರ್ಪ ವೈಕಾರದುನ್ಮತ್ತದಿಂ ರೀತಿಗುಂದುತ್ತ ಮುತ್ತಿರ್ದ ಮಾಯಾಮದಂ ಮೋಹ ಭ್ರಾಂತೋದಕಂಗೊಂಡು ಭೋ ದೇವ ನೀವೀಗ ಕಟ್ಟಿರ್ದ ಸಂಕಲ್ಪಣೇಭಾರ ಪೋವನ್ನ ಸಾಹಸ್ರಕಲ್ಪಂಗಳೊಳ್ಬರ್ಪೆನ್ನೈ ಶಂಭುವೇ ನೋಡು ಜಾತ್ಯಂಧಕಂ ಕಂಗ್ದಿಟ್ಟಗಳ್ಪಂಗುಳಂಗಂಘ್ರಿಗಳ್ಪಂಜೆ ಸ್ತ್ರೀಯಳ್ಗೆ ಸತ್ಪುತ್ರ ಕಂಡಂತೆ ನಿರ್ಧನಿಕಂಗೈದೆ ನಿಕ್ಷೇಪದ್ರವ್ಯಂ ಮಹಾಶಕ್ತಿಹೀನಂಗೆ ಧೈರ್ಯಂ ನಪುಂಸಂಗೆ ಬಲ್ವೀರ್ಯ ಮೂಕಂಗೆ ಶಬ್ದಂ ಮಹಾವ್ಯಾಧಿಪೀಡಂಗೆ ವೈದ್ಯಂ ಪುರಾಣಾಗಮಾಮ್ನಾಯ ಬಾಹ್ಯಂಗೆ ಗೌರಂ ಫಲಂ ಪ್ರಾಪ್ತಿಯಾದಂತೆ ಈ ಮಾನುಷ[ಂ] ಜನ್ಮಂ ಸಂಪ್ರಾಪ್ತಿಯಾಯಿತ್ತು

ಸದ್ಭಕ್ತಿ ಸುಜ್ಞಾನ ವೈರಾಗ್ಯ ಬೀಜಕ್ಕೆ ಮಾತಾಗ್ರಹಂಮೆಂಬ ತಜ್ಜನ್ಮದಿಂ ದಾನು ಸನ್ಮುಕ್ತಿಯಂನ್ಯೈದುವೆಂ ಸಂದಮಾಯಾ ವಿಲಾಸಂಗಳಂ ನೀಗುವೆಂ ಪುಣ್ಯ ಪಾಪಂಗಳಂ ವೇಧಿಸುತ್ತಾಗಳುಂ ಸತ್ಫಲ ಶ್ರೇಣಿ ಧಿಕ್ಕಾರಮಂ ಮಾಡಿ ಸರ್ವೇಶ ನಂಘ್ರಿದ್ವಯಾಂಭೋಜಮಂ ನೋಡಿ ತಸ್ಥಾನದೊಳ್ಬಿರ್ಪೆಮೆಂಬಷ್ಟರೋಳ್ನಿಚ್ಚ ಮಾಯಾಮಹಾಮೋಹಪೆಚ್ಚುತ್ತಲಲ್ಲಲ್ಲಿಗಂ ವ್ಯಾಪಿಸುತ್ತೀಷಣ ತ್ರೈವಿಧಸ್ನೇಹ ಹೊನ್ನೆಣ್ಣು ಮಣ್ಣೆಂಬ ಮೂಲೋಕ [ಉತ್ಕರ್ಷ][1]ಮಂ ಮೆಚ್ಚಿಕೊಂಡಚ್ಚ ಸದ್ಭಕ್ತರಂ ಸಚ್ಚಿದಾಚಾರ್ಯರಂ ಶ್ರೇಷ್ಠ ಲಿಂಗಾಂಗರಂ ನಿಚ್ಚಲಿಂಗಾಂಗ ಭಾವಂಗಳಂ ಮಾಳ್ಪ ಶ್ರೀ ಜಂಗಮಾನೀಕಮಂ ಪಾದತೀರ್ಥ ಪ್ರಸಾದೈಕ ಸುಭೋಗರಂ ನೈಜವಾಗಿರ್ದ ಷಡ್ವರ್ಣಮಂತ್ರಂಗಳುಚ್ಚಾರಣಾಶಾಬ್ದರಂ ಸತ್ಯಶೀಲ ವ್ರತಾಚಾರ ಸಂಯೋಗರಂ ವಂದನಂಗೈಯದೆಲ್ಲಾಗಳುಂ ಹಾಸ್ಯ ದೂಷಂಗಳಂ ಮಾಡುತಾಡುತ್ತೆ

---

೧. ತ್ಕರುಷ

ದುರ್ಮಾರ್ಗ ದುರ್ನೀತಿ ದುರ್ಗೋಷ್ಠಿ ದುರ್ಭಾವ ದುರ್ಮೋಹ ದುಸ್ಸಂಗದಿ ಕಾಮ ವೈಕಾರ ಜ್ವಾಲಾಗ್ನಿಯಿಂ ಕಾಲನಾನಂತ ದುರ್ಬೋಧೆಯಿಂ ಕಂದಿಕುಂದುತ್ತಲ ಜ್ಞಾನ ಸಂಸಾರ ಕೂಪಾರದೊಳ್ಮಗ್ನನಾಗುತ್ತಲಾಳುತ್ತಲೇಳುತ್ತೆ ಬೀಳುತ್ತ ಲಿರ್ಪಾಗಳಾರಂಗಳಂ ಕಾಣದೇ ಹೇಯ ಪುಟ್ಟುತ್ತಿರಲ್ಕೆಲ್ಲ ಜನ್ಮಂಗಳೊಳ್ ಶ್ರೇಷ್ಠ ವಾಗಿರ್ಪ ಸನ್ಮತ್ಯ (?) ಜನ್ಮಂಗಳಿನ್ನೆಂದಿಗುಂಟಪ್ಪುದೋದೇವ ಈ ಜನ್ಮ ಸಾಫಲ್ಯ ವಿನ್ನೆಂದಿಗೋ* ದೇವ ಈ ಜೀವ ನಿರ್ಮುಕ್ತವಿನ್ನೆಂದಿಗೋದೇವ ಈ ಜನ್ಮ ಸಂಹಾರಯಿನ್ನಾವಗೋದೇವ ನಿಮ್ಮಂಘ್ರಿಯುಗ್ಮಂಗಳುದ್ಯುತ್ಕೃಪಾಪಾಂಗದಾ ಲೋಕ[ದಾ]ನಂದವಿನ್ನೆಂದಿಗೋ ಶಂಕರಾ ಭಕ್ತ ಸೌಖ್ಯಾಕರಾ ಮೃಡನೆ ಬಿಡದೆ ಕಾಯೆಂದು ಪಾವಸ್ತೆ ಮಾಡುತ್ತಲತ್ಯಂತ ದೈನ್ಯಂಬಡುತ್ತೊಂದಿಸುತ್ತಿರ್ಪನಂ ಅಂಜಬೇಡೆಂದು ಮನ್ಮಾನಸಗ್ರಸ್ಥ ಶ್ರೀಮನ್ಮಹಾದೇವ ಶ್ರೀ ದೇಶಿಕಾಕಾರ ಮಂತಾಳ್ದು ಸತ್ಪೂರ್ಣಕಾರುಣ್ಯದಿಂದೀಕ್ಷಿಸುತ್ತರ್ಥಿಯಿಂ ನಿತ್ಯ ಹಸ್ತಾಬ್ಜಮಂ ಮಸ್ತಕಾನ್ಯಸ್ತಮಂ ಮಾಡಿ ವೇದಾದಿ ತ್ರೈದೀಕ್ಷೆಯಂ ಚಾರುಶೈವಾದಿ ಭೂಮ್ಯಂತ ತತ್ತ್ವ ಪ್ರಯುಕ್ತ ತ್ರೈದೇಹದುದ್ಭವೀತ್ವಂಗಳಂ ಕ್ಷೆಯ್ಸಿ ತ್ರೈಮೂರ್ತಿ ಪಾದಾಂಬುವಿಂ ಮಾಂಸ ಪಿಂಡತ್ವಮಂ ಮಜ್ಜನಂಗೈಸಿ ತ್ರೈಮಂತ್ರದಿಂ ನಿರ್ಮಲಂ ಮಾಡುತಂ ತ್ರಿವಿಧಾಂಗ ತ್ರಿಹಸ್ತ ಪೀಠಕ್ಕೆ ತತ್ಪೈಸ್ಯನುನ್ಮಸ್ತಕಾಂತಸ್ಸುಚಂದ್ರಾರ್ಕ ವಹ್ನಿಸ್ತಟಿತ್ಕೋಟಿ ಭಾಸ್ವತ್ಪ್ರಭಾಪುಂಜಮಂ ಮೀರಿದಾನಂತ ಸಚ್ಚಿತ್ಕಲಾವಸ್ತುವಂ ಭಾವದಿಂ ತಂದು ಸುಶ್ರೋತ್ರಯುಗ್ಮಂಗಳಂ ಊದಿ ಷಡ್ವರ್ಣ ಮಂತ್ರಂಗಳಂ ಓದಿ ತಧ್ಯಾನ ಸ್ತೋತ್ರಾದ್ಯನುಷ್ಠಾನಮಂ ಪೇಳಿ ಸದ್ಭಕ್ತ ಮಾಹೇಶ ವೈರಾಗ್ಯರೇ ಆದಿಯಾದೇಕವಿಂಶನ್ಮಹಾ ಸಹಸ್ರ ಯೋಗೀಶರೊಳ್ಸಾಕ್ಷಿಯಂ ಮಾಡುತಾಚಾರ್ಯ ರಾಶೀರ್ವಾಚಸ್ತೋಮದಿಂ ಪಂಚನ್ಮಹಾವಾದ್ಯ ಸದ್ಘೋಷದಿಂ ಶೋಭಿವೆತ್ತಿರ್ದ ಸನ್ಮಂಟಪಾಸ್ಥಾನದೊಳ್ದಿವ್ಯ ಮೂಹೂರ್ತದೊಳ್ವೈವಹಂ ಮಾಡಿಯುತ್ಸಾಹದಿಂ ಭಾವ ಪ್ರಾಣೇಷ್ಟಲಿಂಗೇಶನಂ, ಸ್ವಾಯುತಂಗೈಸಿ ಸಂಪ್ರೀತಿಯಿಂದಿತ್ತು ಭಾಳಸ್ಥ ಲಾದ್ಯದೊಳ್ ಭಸ್ಮ ರುದ್ರಾಕ್ಷೆಯಂ ಭೂಷಣಂ ಗೈಸಿ ತೀರ್ಥಪ್ರಸಾದತ್ತ ಸಂಭೋಗನಂ ಮಾಡಿ ಲಿಂಗಾಂಗಶಕ್ತಿ ಸ್ಫುರದ್ಭಕ್ತಿ ಹಸ್ತಾಸ್ಯ ಪದಾರ್ಥ ಮುಂತಾದ ವರ್ನಿರ್ಣಯಂ ಚಿತ್ಕ್ರಿಯಾಲಿಂಗದೊಳ್ತೋರಿಯಲ್ಲಾಗಳುಂ ಪಾಲನೇಮಾಳ್ಪ ಭೋ ದೇಶಿಕೇಂದ್ರ ಯತೀಂದ್ರ[ಂ]ಮಹಾಲಿಂಗ ದೇವೇಶನೇ ಪಾಹಿಮಾಂ ಪಾಹಿಮಾಂ ಇಷ್ಟಲಿಂಗೇಶನೇ ಪಾಹಿಮಾಂ ಪಾಹಿಮಾಂ ಪ್ರಾಣಲಿಂಗೇಶನೇ ಪಾಹಿಮಾಂ ಪಾಹಿಮಾಂ ಭಾವಲಿಂಗೇಶನೇ ಪಾಹಿಮಾಂ ಪಾಹಿಮಾಂ ನಿತ್ಯ ನಿರ್ಲಕ್ಷ್ಯ ನಿರ್ಭೇದ್ಯ ಶ್ರೀ ಚೆನ್ನವೀರೇಶ ಮತ್ಪ್ರಾಣ ಕಾಂತ[ಂ]ನಮಸ್ತೇ ನಮೋ ನಮಃ

ಭಕ್ತಿ ಬಿನ್ನಹ ದಂಡಕ ಸಮಾಪ್ತ ಮಂಗಳ ಮಹಾ

---

* ಪ್ಪುದೊ

# ಕನ್ನಡ ನಾಡು-ನುಡಿಗಳು ಎಷ್ಟು ಪ್ರಾಚೀನ?

ಡಾ|| ಎಂ. ಬಿ. ನೇಗಿನಹಾಳ

ಕರ್ನಾಟಕದಲ್ಲಿ ದೊರೆಯುವ ನಿರ್ದಿಷ್ಟವಾದ ಐತಿಹಾಸಿಕ ದಾಖಲೆಗಳಲ್ಲಿ ಮೌರ್ಯ ಅಶೋಕನ ಪ್ರಾಕೃತ ಲಿಪಿಗಳೇ ಮೊದಲಿನವು. ಅವುಗಳ ತರುವಾಯ ಶಾತವಾಹನ, ಪಲ್ಲವ ಮತ್ತು ಕದಂಬ ರಾಜಮನೆತನಗಳಿಗೆ ಸೇರಿದ ಪ್ರಾಕೃತ ಶಾಸನಗಳು ಅಲ್ಲಲ್ಲಿ ತೋರಿಬಂದಿವೆ. ಕ್ರಿ. ಶ. ಪೂರ್ವ ಮೂರನೆಯ ಶತಮಾನದಿಂದ ಕ್ರಿ. ಶ. ನಾಲ್ಕನೆಯ ಶತಮಾನದವರೆಗಿನ ಸುಮಾರು ಏಳುನೂರು ವರ್ಷಗಳ ಕಾಲಾವಧಿಯಲ್ಲಿ ಇವು ಹುಟ್ಟಿವೆ. ಪ್ರದೇಶವ್ಯಾಪ್ತಿಯ ದೃಷ್ಟಿಯಿಂದ ಇವು ಉತ್ತರದಲ್ಲಿ ಕಲಬುರ್ಗಿ ಜಿಲ್ಲೆಯ ಸನ್ನತಿಯಿಂದ ಪ್ರಾರಂಭಿಸಿ (ಬೆಳಗಾವಿ ಸಮೀಪದ) ವಡಗಾವಿ, ಬನವಾಸಿ, ಮಳವಳ್ಳಿಗಳಲ್ಲೂ ತುಂಗಭದ್ರೆಯ ಎಡಬಲದ ಮಸ್ಕಿ, ಕೊಪ್ಪಳ, ನಿಟ್ಟೂರು ಮೊದಲಾದೆಡೆಗಳಲ್ಲಿಯೂ ದಕ್ಷಿಣ ಕರ್ನಾಟಕದ ಹಿರೇಮಗಳೂರಿನಲ್ಲಿಯೂ ದೊರೆತಿವೆ. ತುಂಗಭದ್ರೆಯ ಎಡಬಲದ ಪ್ರದೇಶದಲ್ಲಿಯೇ ಪ್ರಾಕೃತ ಶಾಸನಗಳ ಸಂಖ್ಯೆ ವಿಶೇಷವಾಗಿದ್ದು ದಕ್ಷಿಣ ಕರ್ನಾಟಕದಲ್ಲಿ ತೀರ ಕಡಿಮೆಯಾಗಿದೆ. ಕರ್ನಾಟಕದ ಮೇಲೆ ಆದ ಆರ್ಯಮೂಲ ಸಂಸ್ಕೃತಿಯ ಪ್ರಭಾವದ ದೃಷ್ಟಿಯಿಂದ ಈ ಸಂಗತಿ ತುಂಬ ಗಮನಾರ್ಹವಾಗಿದೆ. ಕರ್ನಾಟಕ ಸಂಸ್ಕೃತಿಯ ವಿಕಾಸದ ಈ ಹಂತದಲ್ಲಿ ತುಂಗಭದ್ರಾ ನದಿಯೂ ವಿಶಿಷ್ಟ ಪಾತ್ರ ವಹಿಸಿದೆಯೆಂದು ಇದರಿಂದ ಶ್ರುತಪಡುತ್ತದೆ.

ಈವರೆಗೆ ಒಟ್ಟು ಇಪ್ಪತ್ತೊಂದು ಕಡೆ ಪ್ರಾಕೃತ ಶಾಸನಗಳು ಕರ್ನಾಟಕದಲ್ಲಿ ಕಂಡುಬಂದಿವೆ. ಇತ್ತೀಚೆಗೆ ಅಶೋಕನ ಮತ್ತೆರಡು ಶಾಸನಗಳು ದೊರೆತಿದ್ದು, ಕರ್ನಾಟಕದಲ್ಲಿ ಅವನ ಶಾಸನಗಳ ಸಂಖ್ಯೆ ಹತ್ತಕ್ಕೇರಿದೆ. ಧರ್ಮದ ದೃಷ್ಟಿಯಿಂದ

ಇವುಗಳಲ್ಲಿ ಸನ್ನತಿಯ ಬಿಡಿಬರಹಗಳು ಬೌದ್ಧ ಧರ್ಮಕ್ಕೆ ಸಂಬಂಧಿಸಿದ್ದರೆ, ಮಳವಳ್ಳಿಯ ಶಾಸನಗಳು ಶೈವಪರವಾಗಿವೆ. ಮಾಧವಪೂರ–ವಡಗಾವಿ, ಹಿರೇ ಮಗಳೂರು ಮತ್ತು ಹಿರೇಹಡಗಲಿಯ ಪಲ್ಲವ ಶಾಸನಗಳು ವೈದಿಕಮತಕ್ಕೆ ಸಂಬಂಧಿಸಿವೆ. ಇದರಿಂದ ಕನ್ನಡ ಜನಪದವು ವೈದಿಕ–ಅವೈದಿಕವಾದ'ಎರಡೂ ಸಂಪ್ರದಾಯಗಳ ಪ್ರಭಾವವಲಯದಲ್ಲಿ ಅಂದು ಬಾಳುತ್ತಿದ್ದುದು ಸ್ಪಷ್ಟವಿದೆ. ಉತ್ತರದವರಾದ ಮೌರ್ಯರು ತಮ್ಮ ಆಡಳಿತವನ್ನು ನೇರವಾಗಿ ಕರ್ನಾಟಕದ ಮೇಲೆ ಹೇರಿದ್ದರಿಂದ ಅವರ ಕಾಲದಲ್ಲಿ ಕನ್ನಡ ಜನಪದರ ಮೇಲೆ ಆರ್ಯ ಸಂಸ್ಕೃತಿಯ ಪ್ರಭಾವ ಮುದ್ರೆ ದಟ್ಟವಾಗಿ ಮೂಡಿರಬೇಕೆಂದು ತೋರುತ್ತದೆ.

ಹೀಗೆ ಆರ್ಯಸಂಸ್ಕೃತಿಯ ಪ್ರಭಾವದ ನೇರ ಪ್ರಮಾಣಗಳಾದ ಈ ಪ್ರಾಕೃತ ಶಾಸನಗಳಲ್ಲಿ ಸ್ಥೂಲವಾಗಿ ಎರಡು ಭಾಗ ಮಾಡಬಹುದು. ಒಂದು, ಕ್ರಿಸ್ತಪೂರ್ವದ ಹಂತ; ಎರಡನೆಯದು, ಕ್ರಿಸ್ತಶಕದ ಆರಂಭದ ಹಂತ. ಮೊದಲನೆಯ ಹಂತದಲ್ಲಿ ಅಶೋಕನ ಹತ್ತು ಧರ್ಮಲಿಪಿಗಳೂ ಮಾಧವಪೂರ–ವಡಗಾವಿ ಶಾಸನವೂ ಸಮಾವೇಶಗೊಳ್ಳುತ್ತವೆ. ಎರಡನೆಯ ಹಂತದಲ್ಲಿ ಸನ್ನತಿ, ಮಳವಳ್ಳಿ, ಬನವಾಸಿ, ಹಿರೇಹಡಗಲಿ ಮುಂತಾದ ಶಾಸನಗಳು ಸಮಾವೇಶಗೊಳ್ಳುತ್ತವೆ. ಮೊದಲನೆಯ ಹಂತದ ಶಾಸನಗಳಲ್ಲಿ ಕನ್ನಡ ಭಾಷೆಯ ಅಂಶಗಳು ಇಲ್ಲವೆಂದೇ ಹೇಳಬಹುದಾದ ಸ್ಥಿತಿಯಿದ್ದರೆ, ಎರಡನೆಯ ಹಂತದಲ್ಲಿ ಖಚಿತವಾಗಿಯೂ ಕನ್ನಡ ಭಾಷೆಯ ಅಸ್ತಿತ್ವವನ್ನು ಸಿದ್ಧಪಡಿಸುವ ಅಂಶಗಳು ಕಂಡುಬರುತ್ತವೆ. ಇದರಿಂದ ವ್ಯಕ್ತವಾಗುವ ಒಂದು ಅಂಶವೆಂದರೆ, ಕ್ರಿ. ಶ. ಎರಡನೆಯ ಶತಮಾನದ ಹೊತ್ತಿಗಾಗಲೇ ಕರ್ನಾಟಕದ ದ್ರಾವಿಡಮೂಲದ ಜನಾಂಗ ಮತ್ತು ಉತ್ತರದಿಂದ ಬಂದ ಆರ್ಯಮೂಲದ ವಲಸೆಗಾರರಲ್ಲಿ ಸಾಂಸ್ಕೃತಿಕ ಸಾಮರಸ್ಯ ಏರ್ಪಟ್ಟಿತ್ತೆಂಬುದು.

ಒಂದು ಜನಪದದ ಸ್ವರೂಪ ನಿರ್ಮಾಣಕ್ಕೆ ಅದರ ಭೌಗೋಲಿಕ ವ್ಯಾಪ್ತಿ ಮತ್ತು ಅದಕ್ಕಿಂತ ಹೆಚ್ಚಾಗಿ ಅದರ ಭಾಷೆ ಮುಖ್ಯ ಪಾತ್ರ ವಹಿಸುತ್ತವೆ. ಈ ನಿಟ್ಟಿನಿಂದ ನೋಡಿದಾಗ, ತಮಿಳಿನಿಂದ ಕನ್ನಡವು ಬೇರೆಯಾಗಿ ಸ್ವತಂತ್ರ ಅಸ್ತಿತ್ವ ಸಂಪಾದನೆ ಮಾಡಿದ ಕಾಲಾವಧಿಯು ಬಹುಮುಖ್ಯವಾದದ್ದೆನಿಸುತ್ತದೆ.

ಭಾಷೆಯೊಂದನ್ನು ಒಡೆದು ಉಪಭಾಷೆಗಳನ್ನು ನಿರ್ಮಿಸುವಲ್ಲಿ ರಾಜಕೀಯ ಆಡಳಿತವೂ ಒಂದು ಶಕ್ತಿಯಾಗಿ ಕಾರ್ಯನಿರ್ವಹಿಸುತ್ತದೆ. ಅದೂ ಬೇರೊಂದು ಮೂಲದ ಜನಾಂಗದ ಆಡಳಿತವು ಬಹುಮುಖ್ಯವಾದ ಪಾತ್ರವಹಿಸಬಲ್ಲುದು. ಆ ಪೂರ್ವದಲ್ಲಿಯೆ ನಿರ್ಮಾಣಗೊಂಡಿದ್ದ ಉಪಭಾಷಾ ವೈಶಿಷ್ಟ್ಯಗಳು ಮತ್ತೂ ಹೆಚ್ಚುವಂತೆ ಮಾಡಿ ಪ್ರತ್ಯೇಕ ಭಾಷೆಯ ಅಸ್ತಿತ್ವಕ್ಕೆ ಅದು ಕಾರಣವಾಗಲೂ ಬಹುದು. ಮೌರ್ಯ ಆಡಳಿತಕ್ಕೆ ಅಂದು ಕರ್ನಾಟಕದ ಬಹು ಭಾಗಗಳು ಒಳಪಟ್ಟಿದ್ದು, ತಮಿಳುದೇಶವು ಅದರಿಂದ ಮುಕ್ತವಾಗಿದ್ದ ಬಗೆಗೆ ಅಶೋಕನ ಶಾಸನ

ಗಳಲ್ಲಿಯೇ ಸ್ಪಷ್ಟ ಆಧಾರಗಳಿವೆ.[1] ಜತೆಗೆ ಅಶೋಕನ ಪ್ರೋತ್ಸಾಹದಿಂದಾಗಿ ಬೌದ್ಧ ಮತದ ಪ್ರಸಾರವೂ ಕರ್ನಾಟಕದಲ್ಲಿ ನಡೆದಿರಬೇಕೆಂದು ತಿಳಿಯಬಹುದಾಗಿದೆ. ಒಟ್ಟಿನಲ್ಲಿ ಕನ್ನಡವು ಸ್ವತಂತ್ರ ಭಾಷೆಯಾಗಿ ಮಾರ್ಪಡುವಲ್ಲಿ ಮೌರ್ಯರ ಆಡಳಿತವು ಅಪಾರ ಪ್ರಭಾವ ಬೀರಿರಬೇಕೆಂದು ಊಹಿಸಬಹುದಾಗಿದೆ.

ಹೀಗೆ ಕನ್ನಡವು ಶಾತವಾಹನರ ಕಾಲಾವಧಿಗಿಂತ ಪೂರ್ವದಲ್ಲಿಯೇ ಸ್ವತಂತ್ರಗೊಂಡಿರುವ ಸಾಧ್ಯತೆ ಇದೆ. ಪ್ರೊ|| ತೀ. ನಂ. ಶ್ರೀ. ಅವರು ಕ್ರಿ. ಶ. ಪೂ. ಅಯ್ದನೆಯ ಶತಮಾನದಲ್ಲಿ ಅದು ಸ್ವತಂತ್ರಗೊಂಡಿರಬೇಕೆಂದು ಊಹೆಯನ್ನು ಮುಂದೆ ಮಾಡಿದ್ದಾರೆ.[2] ಆದರೆ ನಂಬಲರ್ಹವಾದ ಆಧಾರಗಳು ದೊರೆಯುತ್ತಿರುವುದು ಶಾತವಾಹನರ ಕಾಲದಲ್ಲಿಯೆ ಎಂಬುದನ್ನು ನೆನಪಿಡಬೇಕು. ಅಂಥ ಆಧಾರಗಳನ್ನು ಕುರಿತು ಈಗ ನೋಡಬಹುದು.

ಕರ್ನಾಟಕದಲ್ಲಿ ಈವರೆಗೆ ದೊರೆತಿರುವ ಪ್ರಾಕೃತ ಶಾಸನಗಳು ಮುಂದಿನಂತೆ ಇವೆ:

| | | | |
|---|---|---|---|
| ೧ | ಗವೀಮಠ[3] | ಮೌರ್ಯ ಅಶೋಕ | ಕ್ರಿ.ಶ.ಪೂ. ೩ನೇ ಶ. |
| ೨ | ಪಾಲ್ಕಿಗುಂಡು[3] | ,, | ,, |
| ೩ | ಮಸ್ಕಿ[4] | ,, | ,, |
| ೪ | ಬ್ರಹ್ಮಗಿರಿ[4] | ,, | ,, |
| ೫ | ಸಿದ್ದಾಪುರ[4] | ,, | ,, |
| ೬ | ಜಟಿಂಗರಾಮೇಶ್ವರ[4] | ,, | ,, |
| ೭ | ನಿಟ್ಟೂರು–೧[5] | ,, | ,, |
| ೮ | ನಿಟ್ಟೂರು–೨[5] | ,, | ,, |
| ೯ | ಮಾಧವಪೂರ ವಡಗಾವಿ[6] | — | ಕ್ರಿ.ಶ.ಪೂ. ೧ನೇ ಶ. |
| ೧೦ | ಬನವಾಸಿ[7] | ಶಾತವಾಹನ | ಕ್ರಿ.ಶ. ೨ನೇ ಶ. |

1 Carpus Inscriptionum Indicarum: Vol.I, II Rock Edict.

2 ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಸಂ. ೧, ಬೆಂಗಳೂರು ವಿ.ವಿ. ಪ್ರಕಟಣೆ, ಪು.೧೪; ಡಾ|| ಸೂರ್ಯನಾಥ ಕಾಮತರ ಉಲ್ಲೇಖ.

3 Hydrabad Archaeological Series-X.

4 CII, Vol.I, Ashokan Inscriptions.

5 ಕರ್ನಾಟಕ ಭಾರತಿ, ೧೦-೧.

6 Twelve Years of Kannada Research in Bombay State, 1939-51, pp. vi-vii.

7 ಇದು ಶಾತವಾಹನ ಶಾಸನವೆಂದು ತಿಳಿದುಬರುತ್ತದೆ–ಎಚ್. ಆರ್. ರಘುನಾಥ ಭಟ್, ಕರ್ನಾಟಕ ಶಾಸನ ಕಲೆ, ೧೯೭೩, ಪು. ೮.

| | | | |
|---|---|---|---|
| ೧೧ | ಬನವಾಸಿ[8] | (ಚುಟು) | ಕ್ರಿ.ಶ. ೨ನೇ ಶ. |
| ೧೨ | ಮಳವಳ್ಳಿ[9] | ,, | ,, |
| ೧೩ | ಸನ್ನತಿ[10] | ,, | ,, |
| ೧೪ | ಹಂಪಿ[11] | — | ,, |
| ೧೫ | ಹಿರೇಮಗಳೂರು[13] | — | ಕ್ರಿ.ಶ. ೩ನೇ ಶ. |
| ೧೬ | ಬೆಳ್ವಾಡಗಿ[13] | — | ,, |
| ೧೭ | ಹಿರೇಹಡಗಲಿ[14] | ಪಲ್ಲವ (ಶಿವಸ್ಕಂದವರ್ಮ) | ಕ್ರಿ.ಶ. ೪ನೇ ಶ. |
| ೧೮ | ಚಂದ್ರವಳ್ಳಿ[15] | ಕದಂಬ (ಮಯೂರಶರ್ಮ) | ,, |
| ೧೯ | ಮಳವಳ್ಳಿ[16] | ,, | ,, |
| ೨೦ | ಹುರುಸುಗುಂದಿ[17] | — | ? |
| ೨೧ | ಕುರಗೋಡ[18] | — | ಕ್ರಿ.ಶ. ೪ನೇ ಶ. ? |

ಇವಲ್ಲದೆ, ಇತ್ತೀಚೆಗೆ ಪತ್ರಿಕೆಗಳಲ್ಲಿ ಚಿತ್ರದುರ್ಗದ ಸಮೀಪದ ಗುಹೆಗಳಲ್ಲಿ ಬ್ರಾಹ್ಮೀಲಿಪಿಯ ಶಾಸನಗಳಿರುವುದರ ಬಗೆಗೆ ವರದಿಗಳು ಪ್ರಕಟವಾಗಿವೆ. ಅವು ಬ್ರಾಹ್ಮಿಶಾಸನಗಳೆಂದು ಖಚಿತವಾದರೆ ಕರ್ನಾಟಕದ ಪ್ರಾಕೃತ ಶಾಸನಗಳ ಸಂಖ್ಯೆ ಸುಮಾರು ೨೫ರಷ್ಟು ಆಗುತ್ತದೆ.

---

8 SII, xx, No. 1.
9 EC, vii, ಶಿಕಾರಿಪುರ ೨೬೩ (ರೈಸ್ ಆವೃತ್ತಿ)
10 I. ARSIE, 1966–67, Appendix 'B', No. 203–225; 228–233; II. ಕ. ಭಾ. ೧–೧, ಪು. ೬-೭; III. ಡಾ॥ ಕೆ. ವಿ. ರಮೇಶ್, ಕರ್ನಾಟಕ ಶಾಸನ ಸಮೀಕ್ಷೆ. ಪು. ೨೯.
11 Indian Archaeology—A Survey, 1975–76, p. 62 and Plate LXII.
12 MAR, 1945, No. 7, p. 110.
13 EI, xxxvii, pp. 131-38.
14 Lueders' List of Brahmi Inscriptions, No. 1200.
15 MAR, 1929, p. 50.
16 EC, vii, ಶಿಕಾರಿಪುರ ೨೬೪.
17 'ಸಂಯುಕ್ತ ಕರ್ನಾಟಕ' (ಹುಬ್ಬಳ್ಳಿ), ೩೦–೧೧–೧೯೭೫, ಪು. ೧–೩.
18 All India Oriental Conference, 28th Session, 1976, Dharwad. p. 222.

ಅಶೋಕನ ಶಾಸನಗಳ ಭಾಷೆಯನ್ನು ವಿದ್ವಾಂಸರು 'ಮಗಧನ್' (Magadhan) ಎಂದು ಕರೆದಿದ್ದಾರೆ.[19] ಈ ಮಾಗಧ ಎಂಬುದು ಮುಂದಿನ ಕಾಲಾವಧಿಯ ಪ್ರಾಕೃತಗಳಾದ 'ಮಾಗಧಿ' ಅಥವಾ 'ಅರ್ಧಮಾಗಧಿ' ಭಾಷೆಗಳಲ್ಲ. ಅವೇ ಬೇರೆ ; ಇದೇ ಬೇರೆ. ಜತೆಗೆ ಇದರಲ್ಲಿ ಪ್ರಾಂತಿಕ ವ್ಯತ್ಯಾಸಗಳೂ ಇವೆ.

ಕೊಪ್ಪಳದ ಗವೀಮಠ ಮತ್ತು ಪಾಲ್ಕಿಗುಂಡು ಶಾಸನಗಳಲ್ಲಿ ನಕಾರ ಮೂರ್ಧನ್ಯೀಕರಣ ವಿಶೇಷವಾಗಿದೆ. ದೇವಾಣಂಪಿಯೇ, ಮಾಣುಸೇಹಿ, ಣೋ ಮುಂತಾದ ಉದಾಹರಣೆಗಳನ್ನು ನೋಡಬಹುದು. ಈ ಮೂರ್ಧನ್ಯೀಕರಣವು ಮುಂದಿನ ಕಾಲದ ಮಹಾರಾಷ್ಟ್ರೀ ಪ್ರಾಕೃತದ ವೈಶಿಷ್ಟ್ಯಗಳಲ್ಲಿ ಒಂದೆನಿಸೀತು. ಮೊದಮೊದಲಿನ ಪ್ರಾಕೃತ ಶಾಸನಗಳಲ್ಲಿ ಪದ ಮಧ್ಯ ಸ್ಪರ್ಶಗಳು ಶೂನ್ಯಗೊಳ್ಳುವುದು ಕಡಿಮೆ. ಕ್ರಿ.ಶ.ದ ಪ್ರಾರಂಭದಲ್ಲಿ ಈ ಪ್ರಕ್ರಿಯೆ ಪಶ್ಚಿಮ ಭಾರತದ (ಈಗಿನ ಮಹಾರಾಷ್ಟ್ರ, ಗುಜರಾತ) ಪ್ರಾಕೃತ ಶಾಸನಗಳಲ್ಲಿ ಕಾಣಿಸಿಕೊಳ್ಳತೊಡಗುತ್ತದೆ.[20] ಕ್ರಿ.ಶ. ನಾಲ್ಕನೆಯ ಶತಮಾನಕ್ಕೆ ಸೇರಿದ ಚಂದ್ರವಳ್ಳಿಯ ಶಾಸನದಲ್ಲಿ 'ವಿನಿಮ್ಮಿಅಂ' ಎಂಬ ಪ್ರಯೋಗವಿದೆ. ಇಲ್ಲಿ ಪದ ಮಧ್ಯ ಸ್ಪರ್ಶತಕಾರವು ಶೂನ್ಯಗೊಂಡಿರುವುದನ್ನು ಕಾಣಬಹುದು. ಬಿ. ಎಲ್. ರೈಸರು ಮಳವಳ್ಳಿಯ ಶಾಸನಗಳಲ್ಲಿ ಮಹಾರಾಷ್ಟ್ರೀ ಪ್ರಾಕೃತದ ಛಾಯೆ ಇದೆಯೆಂದು ಹೇಳಿದ್ದಾರೆ. ಸನ್ನತಿಯ ಶಾಸನಗಳಲ್ಲಿ 'ಸೀಹ' (< ಸಂ. ಸಿಂಹ) ಎಂಬ ಪ್ರಯೋಗ ಕಂಡುಬರುತ್ತಿದ್ದು ಅದು ಪಾಲೀ ರೂಪಕ್ಕೆ ಸಮಾನವಾಗಿದೆ. ಈ ರೀತಿ ಮಹಾರಾಷ್ಟ್ರೀ ಪ್ರಾಕೃತದ ಅಂಶಗಳ ಜತೆಯಲ್ಲಿ ಪಾಲಿರೂಪವೂ ಕಂಡುಬರುತ್ತಿರುವುದು, ಕರ್ನಾಟಕದಲ್ಲಿದ್ದ ಆರ್ಯಮೂಲ ಜನಾಂಗಗಳ ವೈವಿಧ್ಯಕ್ಕೆ ಸಂಕೇತವೆಂದು ಭಾವಿಸಬಹುದು.

ಕ್ರಿ. ಶ. ಮೂರು-ನಾಲ್ಕನೆಯ ಶತಮಾನಕ್ಕೆ ಸೇರುವ ಹಿರೇಹಡಗಲಿಯ ಪಲ್ಲವ ಶಾಸನದ ಪ್ರಾಕೃತವು ಬಹುಪಾಲು ಕೃತ್ರಿಮವಾಗಿದೆಯೆಂದು ವಿದ್ವಾಂಸರು ಹೇಳಿದ್ದಾರೆ.[21] ಈ ಶಾಸನ ಹಾಗೂ ಮಳವಳ್ಳಿಯ ಕದಂಬ ಶಾಸನಗಳ ಅಂತ್ಯದಲ್ಲಿ ಸಂಸ್ಕೃತವಾಕ್ಯಗಳಿವೆ. ಇದು ಪ್ರಾಕೃತವು ಹಿಂದೆ ಬೀಳುತ್ತಿದ್ದುದರ ಸ್ಪಷ್ಟ ಸೂಚನೆಯಾಗಿವೆ.

ಅಶೋಕನ ಶಾಸನಗಳಲ್ಲಿ ಚೋಳ, ಪಾಂಡ್ಯ ಮತ್ತು ಕೇರಳಗಳ ಸ್ಪಷ್ಟ ನಿರ್ದೇಶನವಿದೆ. ಆದರೆ ಅವುಗಳಲ್ಲಿ ಕರ್ನಾಟಕದ ಭಾಗಗಳನ್ನು ಸ್ಪಷ್ಟವಾಗಿ

---

19 CII, I, Introduction, p. 56.

20 M. A. Mehendale, Historical Grammar of Inscriptional Prakrits, Introduction, pp. xxix and 61.

21 R. Pischel, Comparative Grammar of Prakrita Languages, para 10.

ನಿರ್ದೇಶಿಸಿಲ್ಲ. 'ಸತಿಯಪುತ್ರ'ವೊಂದನ್ನು ಮಾತ್ರ ನಿರ್ದೇಶಿಸಲಾಗಿದೆ.[22] ಈ 'ಸತಿಯಪುತ್ರ'ವೆಂದರೆ ಇಂದಿನ ದಕ್ಷಿಣ ಕನ್ನಡದ ಪ್ರದೇಶವೆಂದು ಊಹಿಸಲಾಗಿದೆ. ಇದು ಕೂಡ ದ್ರಾವಿಡಮೂಲದ ಪದವಲ್ಲ. ಅಶೋಕನ ಬ್ರಹ್ಮಗಿರಿ ಶಾಸನದಲ್ಲಿ ಬಂದಿರುವ 'ಇಸಿಲ' ಎಂಬ ಪಟ್ಟಣದ ಹೆಸರು ಮಾತ್ರ ಕನ್ನಡ ಮೂಲದ್ದೆಂದು ಡಾ|| ಡಿ. ಎಲ್. ಎನ್. ಅಭಿಪ್ರಾಯಪಟ್ಟಿದ್ದಾರೆ. 'ಇಸಿಲ' ಎಂಬುದು 'ಎಸಿಲ್' ಎಂಬ ಕನ್ನಡ ಶಬ್ದದ ಪ್ರಾಕೃತ ರೂಪವೆಂದೂ ಅದರ ತಮಿಳು ಜ್ಞಾತಿಪದ 'ಎಯಿಲ್' ಎಂದೂ ಅವರು ತಿಳಿಸುತ್ತಾರೆ.[23] ಆದರೆ ಇದು ಕನ್ನಡ ಭಾಷೆಯ ಯಾವ ಹಂತದಲ್ಲೂ ಪ್ರಯೋಗದಲ್ಲಿದ್ದುದು ಕಂಡುಬಂದಿಲ್ಲ.

ಅಶೋಕ ಲಿಪಿಗಳ ತರುವಾಯ ಕ್ರಿ. ಶ. ಪೂ. ಒಂದನೆಯ ಶತಮಾನದ ಮಾಧವಪೂರ–ವಡಗಾವಿ ಶಾಸನದಲ್ಲಿ (ಸ–)ಣ್ಣಾಟಪತಿಸ ಎಂಬ ಪ್ರಯೋಗ ಕಂಡುಬರುತ್ತದೆ. ಇಲ್ಲಿ 'ಣಾಟಪತಿ' ಎಂಬ ಪ್ರಾತಿಪದಿಕಕ್ಕೆ –ಸ ಎಂಬ ಷಷ್ಠೀವಿಭಕ್ತಿ ಪ್ರತ್ಯಯ ಸೇರಿದೆ. ಪ್ರಾಕೃತ ಶಾಸನಗಳಲ್ಲಿ ನಕಾರಕ್ಕೆ ಬದಲು ಣಕಾರವಿರುವುದು ಅಪರೂಪವೇನಲ್ಲ. ಆದುದರಿಂದ ಇದು 'ನಾಟಪತಿ' ಎಂಬ ಅರಿಸಮಾಸವೆಂದು ಹೇಳಬಹುದು. ಇಲ್ಲಿಯ 'ನಾಟ' ಎಂಬ ಪೂರ್ವಪದವು ಇಂದು ಕನ್ನಡದಲ್ಲಿ ಪ್ರಚುರವಾಗಿರುವ 'ನಾಡು' ಎಂಬುದರ ಪ್ರಾಚೀನರೂಪ. ಪುನ್ನಾಟ, ಕರ್ನಾಟ (ಅಥವಾ ಪುಣ್ಣಾಟ, ಕಣ್ಣಾಟ) ಎಂಬ ಸಮಾಸಗಳಲ್ಲಿಯೂ ಈ ರೂಪವಿರುವುದನ್ನು ಕಾಣಬಹುದು. ತಮಿಳಿನಲ್ಲಿಯೂ 'ನಾಟ್ಟು' 'ನಾಟ್ಟಾನ್' ಮುಂತಾದ ಪ್ರಯೋಗಗಳಿವೆ. ಆದುದರಿಂದ ವಡಗಾವಿ ಶಾಸನದ ಈ ಪದವನ್ನು ಈವರೆಗೆ ತಿಳಿದುಬಂದಿರುವಂತೆ ಕನ್ನಡ ಭಾಷೆಯ ಅಸ್ತಿತ್ವವನ್ನು ಸಿದ್ಧಪಡಿಸುವ ಸ್ಪಷ್ಟವಾದ ಪ್ರಥಮಾಧಾರವೆನ್ನಬಹುದು.

ಕ್ರಿ.ಶ. ಎರಡನೆಯ ಶತಮಾನದ ಮಳವಳ್ಳಿಯ ಶಾಸನದಲ್ಲಿ ಅದೇ ಮಳವಳ್ಳಿಯನ್ನು 'ಮಟ್ಟಪಟ್ಟಿ' ಎಂದು ಕರೆದಿದೆ. ಇಲ್ಲಿಯ ಉತ್ತರ ಪದ 'ಪಟ್ಟಿ'[24] ಎಂಬುದು 'ಗ್ರಾಮ' ಎಂಬ ಅರ್ಥದ್ದು. ಇದಕ್ಕೆ ತಮಿಳು, ತೆಲಗು, ಮಲೆಯಾಳಗಳಲ್ಲಿ ಮತ್ತು ಅನಂತರದ ಕನ್ನಡದಲ್ಲಿ ಇದೇ ಅರ್ಥವಿದೆ. ಸರಿಸುಮಾರು ಇದೇ ಅವಧಿಗೆ ಸೇರಿದ ಸನ್ನತಿಯ ಶಾಸನಗಳಲ್ಲಿ ಒಂದು 'ಸಂಬಲೀವಲೂರ ವಾಸಿನೋ ಆಪಕುಟಿಸ'[25] ಎಂಬ ಪಾಠವನ್ನೀಯುತ್ತದೆ. ಇಲ್ಲಿ 'ಸಂಬಲೀವಲೂರ' ಎಂಬುದರ ಅಂತ್ಯದಲ್ಲಿ

---

22 ಅಡಿ ಟಿಪ್ಪಣಿ ೧ ನೋಡಿ.

23 Karnatak Through the Ages, pp. 109–110.

24 ಲೂಡರ್ಸ್ ಇದನ್ನು 'ಮಳಪಳಿ' ಎಂದು ಓದಿದ್ದಾರೆ–ನೋಡಿ: LLBI, No. 1195 & 1196. ಆದರೆ 'ಸೋಮಪಟ್ಟಿ' ಎಂಬಲ್ಲಿ ಮಾತ್ರ 'ಪಟ್ಟಿ' ಎಂದೇ ಓದಿದ್ದಾರೆ. ಪಳಿ(ಳ್ಳಿ) ಎಂಬುದೂ ಗ್ರಾಮವಾಚಕವೇ.

25 ಅ. ಟಿ. ೧೮–Iರಲ್ಲಿ ನಂ. ೨೧ರ ಶಾಸನ.

'ಊರ್' ಎಂಬ ಕನ್ನಡ ಆಕೃತಿಯೂ ಇದ್ದುದು ಸ್ಪಷ್ಟ. 'ಸಂಬಲೀವಊರ' ಎಂಬುದನ್ನು 'ಸಂಬಲ + ಈವ + ಊರ' ಎಂದು ವಿಭಾಗಿಸಬಹುದೇನೋ? ಸನ್ನತಿಯ ಇನ್ನೊಂದು ಶಾಸನದಲ್ಲಿ 'ಮೂಡಾಣ ಮಹಾಗಾಮಿ' ಎಂಬ ಪ್ರಯೋಗ ಕಂಡುಬರುತ್ತದೆ.[26] ಇಲ್ಲಿಯ 'ಮೂಡಾಣ' ಎಂಬುದು 'ಮೂಡಣ' ಎಂಬ ದಿಗ್ವಾಚಿಯ ಪುರಾತನರೂಪವಾಗಿರುವಂತೆ ಕಾಣುತ್ತದೆ.

ಇದಾದಮೇಲೆ ಕ್ರಿ.ಶ. ಸುಮಾರು ಮೂರನೆಯ ಶತಮಾನದ ಹಿರೇಹಡಗಲಿಯ ಶಾಸನದಲ್ಲಿ 'ಕೋಟ್ಟಸಮ' (= ಕೋಟ್ಟಶರ್ಮ) ಎಂಬ ವ್ಯಕ್ತಿಯ ಹೆಸರಿದೆ. ಜತೆಗೆ ಆಪಿಟ್ಟಿ ಎಂಬ ಗ್ರಾಮವಾಚಕವೂ ಇದೆ. 'ಕೋಟ್ಟಸಮ'ದಲ್ಲಿಯ 'ಕೋಟ್ಟ' ಎಂಬುದು ದ್ರಾವಿಡಮೂಲದ್ದಿರುವಂತೆ ಕಾಣುತ್ತದೆ. ತಮಿಳಿನ ಕೋಟ್ಟೈ, ಕನ್ನಡದ ಕೋಟ್ಟೆ (>ಕೋಂಟೆ>ಕೋಟೆ) ಮಲೆಯಾಳಿಯ 'ಕೋಟ್ಟ' ಇವು ಇದರ ಜ್ಞಾತಿ ರೂಪಗಳು. ಆದುದರಿಂದ ಇಲ್ಲಿಯ ಪ್ರಯೋಗವು ಕನ್ನಡದಿಂದ ಸ್ವೀಕರಿಸಿದ್ದೆಂದು ಹೇಳಬಹುದು. ಆದರೆ ಹೀಗೆ ಹೇಳುವುದಕ್ಕೆ ಒಂದು ಆತಂಕವಿದೆ. ಕ್ರಿ.ಶ.ಪೂ. ೩ನೆಯ ಶತಕದ ಅಶೋಕನ ಸಾರನಾಥ ಶಾಸನದಲ್ಲಿ 'ಕೋಟ' ಎಂದು ಈ ಪದ ಪ್ರಯೋಗ ಕಂಡುಬರುತ್ತದೆ.[27] ಎಂದರೆ ದ್ರಾವಿಡಮೂಲದ ಈ ಪದ ಅಷ್ಟು ಹಿಂದೆಯೆ ಪ್ರಾಕೃತದಲ್ಲಿ ಸೇರಿಹೋಗಿತ್ತೆಂದು ಭಾವಿಸಬೇಕಾಗುತ್ತದೆ. ಈ ಕಾರಣಕ್ಕಾಗಿ ಹಿರೇಹಡಗಲಿಯ ಶಾಸನದ 'ಕೋಟ್ಟ'—ಎಂಬ ಪ್ರಯೋಗವು ಅಂದಿನ ಕನ್ನಡದಿಂದ ಪ್ರಾಕೃತಕ್ಕೆ ಸೇರಿದ್ದೆಂದು ಹೇಳಲು ಅನುಮಾನಪಡಬೇಕಾಗುತ್ತದೆ. ಆದರೂ ಇಲ್ಲಿಯ 'ಟ್ಟ'ಕಾರದ್ವಿತ್ವವು ಕನ್ನಡದ ಪ್ರಭಾವವಾಗಿರುವ ಸಾಧ್ಯತೆ ಇದೆ.

ಕ್ರಿ.ಶ. ನಾಲ್ಕನೆಯ ಶತಮಾನಕ್ಕೆ ಸೇರಿದ ಚಂದ್ರವಳ್ಳಿ ಶಾಸನದಲ್ಲಿ 'ಪುನಾಟ' (ಅಥವಾ ಪುಣಡ) ಎಂಬ ಉಲ್ಲೇಖವಿದೆ. ಇದು 'ಪುನ್ನಾಟ' ಎಂಬುದರ ಪ್ರಾಕೃತರೂಪ. ಡಾ|| ಡಿ. ಎಲ್. ಎನ್. ಇದನ್ನು 'ಪುನಲ್ + ನಾಟ' ಎಂದು ಬಿಡಿಸಿದ್ದಾರೆ.[28] ಇದರ ಉತ್ತರಪದವಾದ 'ನಾಟ' ಎಂಬ ರೂಪವು ಕನ್ನಡ ಮೂಲದ್ದೆಂಬ ಬಗೆಗೆ ಭಿನ್ನಾಭಿಪ್ರಾಯವಿರಲಾರದು. ಕ್ರಿ.ಶ. ೬ನೆಯ ಶತಮಾನದ ಸಂಸ್ಕೃತ ಶಾಸನವೊಂದು 'ಪುಂರಾಷ್ಟ್ರ' ಎಂದು ಪುನ್ನಾಟವನ್ನು ಹೆಸರಿಸಿದೆ.[29] ಇಂದಿನ ಮೈಸೂರು ಜಿಲ್ಲೆಯಲ್ಲಿ ಪ್ರಾಚೀನ ಕಾಲದಲ್ಲಿದ್ದ ಚಿಕ್ಕ ರಾಜ್ಯವೇ ಈ 'ಪುನ್ನಾಟ'. ಕ್ರಿ.ಶ. ಎರಡನೆಯ ಶತಮಾನದ ಗ್ರೀಕ್ ಭೂಗೋಲಜ್ಞ ಟಾಲೆಮಿ ಕೂಡ ಇದನ್ನು ಹೆಸರಿಸಿದ್ದಾನೆ.[30]

---

26 ಅದೇ. ನಂ. ೩೩೪ರ ಶಾಸನ.
27 CII, I. p. 162—10th line of the Edict.
28 ಅ. ಟಿ. ೩೩.
29 MAR, 1917, p. 33 – ಮಾಂಬಳ್ಳಿ ತಾಮ್ರಶಾಸನ.
30 Sources of Karnatak History–I, p. 4.

ಇದೇ ಶತಮಾನದ ಮಳವಳ್ಳಿಯ ಕದಂಬ ಶಾಸನದಲ್ಲಿ ವೆಟ್ಟಕ್ಕಿ, ವೇಗೂರಂ, ಮರಿಯಸಾ, ಕೊಂಗಿನಗರಂ, ಮಟ್ಟಪಟ್ಟಿ, ಸೋಮಪಟ್ಟಿ, ಎಕ್ಕಟ್ಟಾ(ದ್ಧಾ)ಹಾರ, ಕುನ್ದತಪುಕ, ಕೋಣತಪುಕ, ಕುನ್ದಮುಚ್ಚುಂಡಿ, ಅಪರಮುಚ್ಚುಂಡಿ, ಕಪ್ಪೆನ್ನಲಾ, ಕರಿಪೆನ್ನೂಲ ಎಂಬ ಊರ ಹೆಸರುಗಳಿವೆ. ಈ ಊರ ಹೆಸರುಗಳಲ್ಲಿ ಬಹಳಷ್ಟು ಕನ್ನಡ ಭಾಷೆಯ ಅಂಶಗಳಿವೆ. ವೆಟ್ಟಕ್ಕಿ, ವೇಗೂರಂ, ಮಟ್ಟಪಟ್ಟಿ ಮುಂತಾದವು ಕನ್ನಡ ಮೂಲದವೆಂಬ ಸಂಗತಿ ಎದ್ದು ಕಾಣುತ್ತದೆ. 'ವೇಗೂರಂ' ಎಂಬುದರ ಕೊನೆಯಲ್ಲಿಯೂ 'ಊರ್' ಆಕೃತಿಮಾ ಇರುವುದನ್ನು ಕಾಣಬಹುದು. ವೆಟ್ಟಕ್ಕಿ ಮತ್ತು ವೇಗೂರಗಳ ಆದಿಯಲ್ಲಿ ವಕಾರವಿರುವುದನ್ನು ಕಾಣಬಹುದು. ಅಂದು ಕನ್ನಡ ಶಬ್ದಗಳ ಆದಿಯಲ್ಲಿ ವಕಾರವು ಪ್ರಬಲವಾಗಿದ್ದುದರ ಸಂಕೇತ ಇವು. ಕುನ್ದಮುಚ್ಚುಂಡಿ, ಅಪರಮುಚ್ಚುಂಡಿ ಎಂಬ ಗ್ರಾಮವಾಚಕಗಳಲ್ಲಿ 'ಮುಚ್ಚುಂಡಿ' ಎಂಬುದು ಉಭಯ ಸಾಮಾನ್ಯ ರೂಪವಿರುವುದನ್ನು ಗಮನಿಸಿದರೆ[31] ಇಲ್ಲಿ 'ಕುನ್ದ' ಎಂಬುದು ವಿಶೇಷಣ ರೂಪದಲ್ಲಿ ಪ್ರಯೋಗವಾಗಿರುವುದನ್ನು ಕಾಣಬಹುದು. 'ಕುನ್ದತಪುಕಂ' ಎಂಬುದರಲ್ಲಿಯೂ ಇದು ಕಂಡುಬರುತ್ತದೆ. ಆದುದರಿಂದ ಇಲ್ಲಿಯ 'ಕುನ್ದ' ಎಂಬುದು ಸ್ವತಂತ್ರವಾದ ಆಕೃತಿಮಾ ಎಂದು ಹೇಳಬಹುದು. ತಮಿಳಿನ 'ಕುನ್ರು' (ಗುಡ್ಡ, ಬೆಟ್ಟ ಎಂಬ ಅರ್ಥದಲ್ಲಿ) ಎಂಬುದು ಇದರ ಸಮಾನಾರ್ಥಕ ಶಬ್ದ. ಇಲ್ಲಿ ತಮಿಳಿನಲ್ಲಿಯ ವರ್ತ್ಸ್ಯ ತಕಾರಕ್ಕೆ ಬದಲಾಗಿ ಕನ್ನಡದಲ್ಲಿ 'ದಂತ್ಯ'ವಿರುವುದು ಸ್ಪಷ್ಟ. ಇದೇ ರೀತಿ ಹಲ್ಮಿಡಿ ಶಾಸನದ 'ಪೆತ್ತ'– 'ಪತ್ತೊನ್ದಿ' ಎಂಬ ಪ್ರಯೋಗಗಳಲ್ಲಿಯೂ ವರ್ತ್ಸ್ಯ ತಕಾರವು ದಂತ್ಯವಾಗಿ ಪರಿವರ್ತಿಸಿರುವುದನ್ನು ಕಾಣಬಹುದು. ಇದರಿಂದ ಮೂಲದ್ರಾವಿಡದ ಈ ಧ್ವನಿಯು ಕ್ರಿ. ಶ. ನಾಲ್ಕನೆಯ ಶತಮಾನಕ್ಕಾಗಲೇ ಕನ್ನಡದಲ್ಲಿ ದಂತ್ಯವಾಗಿ ಪರಿವರ್ತಿಸಿತ್ತೆಂದು ಸಿದ್ಧವಾಗುತ್ತದೆ. ಇದೇ ಕಾರಣಕ್ಕಾಗಿ, ವರ್ತ್ಸ್ಯ ತಕಾರವು ಬದಲಾವಣೆಗೊಳ್ಳತೊಡಗಿದ್ದು ಕ್ರಿ.ಶ. ೭–೮ನೆಯ ಶತಮಾನಗಳ ತರುವಾಯದಲ್ಲಿ ಎಂದು ಹೇಳುವ ಡಾ|| ಭ. ಕೃಷ್ಣಮೂರ್ತಿಯವರ ಅಭಿಪ್ರಾಯವು[32] ಅಸಮರ್ಥನೀಯವೆನಿಸುತ್ತದೆ.

ಕುನ್ದತಪುಕಂ, ಕೋಣತಪುಕಂ ಎಂಬೆರಡು ಸ್ಥಳವಾಚಕಗಳಲ್ಲಿ 'ಪುಕಂ' ಎಂಬ ಸಾಧಾರಣ ಅಂಶ ಕಂಡುಬರುತ್ತದೆ. ಮೇಲೆ ತೋರಿಸಿರುವಂತೆ 'ಕುನ್ದ' ಎಂಬುದು ಸ್ವತಂತ್ರವಾಗಿ ಪ್ರಯೋಗಗೊಳ್ಳುವ ಆಕೃತಿಮಾ ಆಗಿದೆ. ಇದರಿಂದ 'ಕುನ್ದತ' 'ಕೋಣತ' ಎಂಬವುಗಳಲ್ಲಿಯ 'ತ' ಎಂಬುದು ಒಂದು ಪ್ರತ್ಯಯವೆಂಬುದು

---

31 ಶಿಕಾರಿಪುರ ತಾಲ್ಲೂಕಿನ ತಾಳಗುಂದ ಹೋಬಳಿಯಲ್ಲಿ ಈಗ ಇರುವ 'ಮಾಯಿತಮ್ಮನ ಮುಚಡಿ' ಮತ್ತು 'ಅಗ್ರಹಾರ ಮುಚಡಿ' ಎಂಬ ಊರುಗಳೇ ಪ್ರಸ್ತುತ ಶಾಸನದ 'ಮುಚ್ಚುಂಡಿ'ಗಳಾಗಿರುವ ಸಾಧ್ಯತೆ ಇದೆ.

32 Telugu Verbal Bases, p. 71.

ಸ್ಪಷ್ಟಪಡುತ್ತದೆ. ಈ 'ತ' ಷಷ್ಠೀವಿಭಕ್ತಿಯ ಪ್ರತ್ಯಯವಾಗಿರುವ ಸಾಧ್ಯತೆ ಇದೆ. ತುಳುವಿನಲ್ಲಿ ಈಗ ತ ಷಷ್ಠೀ ವಿಭಕ್ತಿ ಪ್ರತ್ಯಯವಾಗಿದೆ.[33]

ವೇಗೂರಂ ಮತ್ತು ಕೊಂಗಿನಗರಂ ಎಂಬೆರಡು ಊರುಗಳಲ್ಲಿ (ಎರಡು ಸ್ವರಗಳ ಮಧ್ಯದಲ್ಲಿ ಮತ್ತು ಅನುನಾಸಿಕದ ಪರದಲ್ಲಿ) ಘೋಷಸ್ಪರ್ಶಧ್ವನಿ ಇರುವುದನ್ನು ಕಾಣಬಹುದು. ತಮಿಳಿನ ಪ್ರಾಚೀನ ಲೇಖನಗಳಲ್ಲಿ ಘೋಷಧ್ವನಿಗಳಿಗೆ ಪ್ರತ್ಯೇಕ ಸಂಜ್ಞೆಗಳಿರಲಿಲ್ಲವೆಂಬುದನ್ನು ಸ್ಮರಿಸಿದರೆ ಕನ್ನಡವು ಎರಡನೆಯ ಶತಮಾನಕ್ಕಾಗಲೇ ಸ್ವತಂತ್ರ ಅಸ್ತಿತ್ವ ಹೊಂದಿದ್ದುದು ಸ್ಪಷ್ಟವಾಗುತ್ತದೆ.

ಇನ್ನು 'ಕರಿಪೆನ್ದೂಲ' ಎಂಬುದರ ಅಂತ್ಯ ಲಕಾರ ರಕಾರದ ಪರಿವರ್ತನೆ ಆಗಿರುವ ಸಾಧ್ಯತೆ ಇದೆ. ಪ್ರಾಕೃತದಲ್ಲಿ ಇದು ಅಸಂಭವವೇನೂ ಇಲ್ಲ. 'ಪುಳು ಮಾಯಿ' ಎಂಬ ಶಾತವಾಹನ ರಾಜನ ಹೆಸರು ದ್ರಾವಿಡಮೂಲದ್ದೆಂದು ವಿದ್ವಾಂಸರು ಸೂಚಿಸಿದ್ದಾರೆ.[34] ಕೆಲವು ನಾಣ್ಯಗಳ ಮೇಲೆ ತೋರುವ 'ವಿಳೀ ವಾಯುಕುರ'[35] ಎಂಬುದೂ ಅಂಥದೇ ಒಂದು ಹೆಸರು.

ಈ ಸಂದರ್ಭದಲ್ಲಿ ಗ್ರಾಂಥಿಕವಾದ ಕೆಲವು ಪ್ರಾಚೀನ ಉಲ್ಲೇಖಗಳನ್ನು ಗಮನಿಸಬಹುದು. ಕ್ರಿಸ್ತಪೂರ್ವ ಯುಗದ ಎರಡು ಅಥವಾ ಮೂರನೆಯ ಶತಮಾನ ದಲ್ಲಿ ರಚಿಸಲ್ಪಟ್ಟದ್ದೆಂದು ತಿಳಿಯಲಾಗುವ ಪಾಣಿನಿಯ ಅಷ್ಟಾಧ್ಯಾಯಿಯಲ್ಲಿ ಗೋತ್ರನಾಮಗಳ ಪೈಕಿ 'ಕರ್ನಾಢಕ' ಎಂಬುದೂ ಒಂದು.[36] ರಾಮಾಯಣದ 'ಕಿಷ್ಕಿಂಧೆ' ಮಹಾಭಾರತದ 'ವನವಾಸಿ'ಗಳು ಕರ್ನಾಟಕದ ಭಾಗಗಳೆಂಬುದನ್ನು ನಿರ್ವಿವಾದವಾಗಿ ಒಪ್ಪಲಾಗಿದೆ. ಆದರೆ ಮಹಾಭಾರತದಲ್ಲಿಯ 'ಕರ್ಣಾಟಕ' ಎಂಬ ಉಲ್ಲೇಖಗಳಿಗೆ ಪ್ರತಿಯಾಗಿ 'ಕುಂತಲ' ಎಂಬ ಪಾಠವನ್ನು ಪುಣೆಯ ಭಂಡಾರಕರ ಸಂಸ್ಥೆಯವರು ಅಂಗೀಕರಿಸಿರುವುದನ್ನು ಡಾ|| ಮುಗಳಿ ಎತ್ತಿತೋರಿದ್ದಾರೆ. ರಾಮಾಯಣ–ಮಹಾಭಾರತಗಳ ರಚನಾ ಕಾಲವು ತೀರ ಅನಿರ್ದಿಷ್ಟವಾಗಿದೆ. ಈ ಮಾತು ಪ್ರಾಚೀನ ತಮಿಳು ಕೃತಿಗಳಾದ 'ಶಿಲಪ್ಪದಿಗಾರಂ'ದಂಥ ಕಾವ್ಯಗಳಿಗೂ ಅನ್ವಯಿಸುತ್ತದೆ. ರಾಮಾಯಣ–ಮಹಾಭಾರತಗಳ ದೊಡ್ಡಗಾತ್ರ ಕ್ರಿ.ಶ. ೪ನೆಯ ಶತಮಾನದಷ್ಟೊತ್ತಿಗೆ ಸಿದ್ಧವಾಗಿತ್ತೆಂದು ಭಾವಿಸಲಾಗುತ್ತಿದೆ.

ಕ್ರಿ.ಶ. ಎರಡನೆಯ ಶತಮಾನದ ಬೌದ್ಧಗ್ರಂಥ ಲಲಿತ ವಿಸ್ತರದ 'ಕನಾರಿ' ಎಂಬ ಲಿಪಿಯ ಹೆಸರು, ಶೂದ್ರಕ ಕವಿಯ ಮೃಚ್ಛಕಟಿಕದಲ್ಲಿ ಬಂದಿರುವ 'ಕಣ್ಣಾಡತಲಹ ಪ್ರಯೋಗ', ಹಾಲರಾಜನ ಗಾಥಾಸಪ್ತಶತಿಯಲ್ಲಿ

33 M. Mariappa Bhat, Tulu-English Dictionary, p. 106.
34 R. S. Mugali, Heritage of Karnatak, pp. 49–50.
35 Walter Elliot, Coins of Southern India, B-No. 39, p. 152.
36 ಪಾಣಿನಿಯ ಅಷ್ಟಾಧ್ಯಾಯಿ—II, IV, ಸೂತ್ರ ೬೩.

ಬಂದಿರುವ ‘ ತೀರ್ ’ ಮುಂತಾದ ಶಬ್ದಗಳು–ಇವೇ ಮೊದಲಾದುವನ್ನು ಗಮನಕ್ಕೆ ತೆಗೆದುಕೊಂಡರೆ ‘ಕರ್ನಾಟಕ’ ಎಂಬ ಜನಪದವು ಕ್ರಿ.ಶ. ಪೂರ್ವ ಮೂರು ಅಥವಾ ಎರಡನೆಯ ಶತಮಾನದ ಅವಧಿಯಲ್ಲಿ ಅಸ್ತಿತ್ವದಲ್ಲಿತ್ತು ಎಂದು ತಿಳಿಯುತ್ತದೆ. ಅದರ ಸ್ವತಂತ್ರ ಅಸ್ತಿತ್ವ ನಿರ್ಮಾಣದಲ್ಲಿ ಪ್ರಾಕೃತವು ಸಾಕಷ್ಟು ಪ್ರಭಾವ ಬೀರಿದೆ. ಅನೇಕರಿಗೆ ಅದೂ ಒಂದು ಪ್ರಾಕೃತವೇ ಎಂಬ ಭ್ರಮೆ ಉಂಟಾಗುವಂತಾಗಿದೆ. ಕನಿಷ್ಟಪಕ್ಷ ಕೆಲವರಾದರೂ ಆ ರೀತಿ ಭಾವಿಸುತ್ತಿದ್ದರೆಂಬುದಕ್ಕೆ ಶಾಸನಾಧಾರ ಕೂಡ ಇದೆ.[37] ಆದ್ದರಿಂದ ಕನ್ನಡವು ತಮಿಳಿನಿಂದ ಪ್ರತ್ಯೇಕಗೊಂಡದ್ದು ಪ್ರಾಕೃತ ಶಾಸನಗಳ ಅವಧಿಯಲ್ಲಿಯೇ–ಎಂದರೆ ಮೊದಲ ಹಂತದಲ್ಲಿಯೇ ಎಂದು ಹೇಳಬಹುದು.

37 Karnatak Inscriptions, Vol. I, No. 2, 699 A.D.

# ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ

## ಲೇಖನಗಳ ಸೂಚಿ

(೧೯೭೧ ರಿಂದ ೧೯೮೨ರ ವರೆಗೆ)

ಟಿ. ವಿ. ವೆಂಕಟರಮಣಯ್ಯ



ಕನ್ನಡ ಸಾಹಿತ್ಯ ಪರಿಷತ್ತು

ಚಾಮರಾಜಪೇಟೆ ಬೆಂಗಳೂರು ೧೮

# ಪರಿವಿಡಿ

ಭಾಗ ೧ : ವರ್ಗೀಕೃತ ವಿಭಾಗ

ಭಾಗ ೨ : ಲೇಖಕರ ಸೂಚಿ (ಅಕಾರಾದಿ)

ಭಾಗ ೩ : ವಿಷಯ ಸೂಚಿ (ಅಕಾರಾದಿ)

ವರ್ಗೀಕೃತ ವಿಭಾಗ :

ಭಾಷಾಶಾಸ್ತ್ರ
ಛಂದಸ್ಸು
ಅಲಂಕಾರ
ಜನಪದ ಸಾಹಿತ್ಯ
ಸಾಹಿತ್ಯ (ಸಾಮಾನ್ಯ)
ಕನ್ನಡ ಸಾಹಿತ್ಯ
ವಚನ ಸಾಹಿತ್ಯ
ಗ್ರಂಥ ಸಂಪಾದನೆ
ಕನ್ನಡ ಕವಿ–ಕಾವ್ಯ ವಿಮರ್ಶೆ (ಪ್ರಾಚೀನ)
ಕನ್ನಡ ಕಾವ್ಯ (ಆಧುನಿಕ)
ಕನ್ನಡ ನಾಟಕಗಳು / ರಂಗಭೂಮಿ
ಕನ್ನಡ ಕಾದಂಬರಿಗಳು / ಕಥೆಗಳು
ಭಾರತೀಯ ಭಾಷಾ–ಸಾಹಿತ್ಯ
ಅನ್ಯದೇಶೀಯ ಸಾಹಿತ್ಯ
ತರ್ಕಶಾಸ್ತ್ರ
ದರ್ಶನ
ಧರ್ಮ
ಸಮಾಜಶಾಸ್ತ್ರ
ಕಲೆಗಳು
ಇತಿಹಾಸ, ಶಾಸನಗಳು, ಸಂಶೋಧನೆ

## ಸಂಲೇಖಗಳ ಜೋಡಣೆ

೧ ವರ್ಗೀಕೃತ ವಿಭಾಗದಲ್ಲಿ ಲೇಖನಗಳನ್ನು ಹಲವು ವಿಷಯಗಳಡಿಯಲ್ಲಿ ಲೇಖಕರ ಹೆಸರಿನ ಅಕಾರಾದಿಯಾಗಿ ಜೋಡಿಸಲಾಗಿದೆ. ಪ್ರತಿಯೊಂದು ಸಂಲೇಖದಲ್ಲಿ ಲೇಖಕರ ಹೆಸರು, ಲೇಖನದ ಶೀರ್ಷಿಕೆ, ಅದರಡಿಯಲ್ಲಿ ಪತ್ರಿಕೆಯ ಸಂಪುಟ ಹಾಗೂ ಸಂಚಿಕೆಗಳ ಸ್ಂಖ್ಯೆ, ಸಂಚಿಕೆಯ ತಿಂಗಳು ಹಾಗೂ ವರ್ಷ, ನಂತರ ಲೇಖನದ ಪ್ರಾರಂಭ ಪುಟ ಹಾಗೂ ಮುಕ್ತಾಯ ಪುಟ ಸಂಖ್ಯೆಯನ್ನು ಸೂಚಿಸಲಾಗಿದೆ.

ಉದಾ: ಶ್ರೀಕಂಠಯ್ಯ (ಕೆ)
ಕನ್ನಡ ಕಾವ್ಯಗಳಲ್ಲಿ ತಾಂಬೂಲ ಚರ್ವಣ
[೬೬-೧. ಜೂನ್ ೧೯೮೧. ಪು. ೨೬-೩೪]

ವರ್ಗೀಕೃತ ವಿಭಾಗದಲ್ಲಿಯ ಎಲ್ಲಾ ಸಂಲೇಖಗಳಿಗೂ ಕ್ರಮಾಂಕ ನೀಡಲಾಗಿದೆ.

೨ ಲೇಖಕರ ಅಕಾರಾದಿ ಸೂಚಿಯಲ್ಲಿ ಲೇಖಕರ ಹೆಸರಿನ ಎದುರಿಗೆ ಅವರು ಬರೆದಿರುವ ಲೇಖನಗಳ ಕ್ರಮಾಂಕ (ವರ್ಗೀಕೃತ ವಿಭಾಗದಲ್ಲಿಯ ಕ್ರಮಾಂಕ) ವನ್ನು ನೀಡಲಾಗಿದೆ.

೩. ವಿಷಯ ಸೂಚಿಯನ್ನು ಅಕಾರಾದಿಯಾಗಿ ಜೋಡಿಸಲಾಗಿದೆ. ವಿಷಯದ ಎದುರಿಗೆ ವರ್ಗೀಕೃತ ವಿಭಾಗದಲ್ಲಿ ನೀಡಿರುವ ಕ್ರಮಾಂಕಗಳನ್ನು ನೀಡಲಾಗಿದೆ.

# ಭಾಷಾಶಾಸ್ತ್ರ

೧ ಜಾಗೀರ್‌ದಾರ್ (ಸೀತಾರಾಮ)
ಅಮರಕೋಶದ ಒಬ್ಬ ಪ್ರಾಚೀನ ಕನ್ನಡ ವ್ಯಾಖ್ಯಾತ [೬೧–೨ ಡಿಸೆಂ. ೧೯೭೬. ಪು. ೫೫–೬೦]

೨ ತಿಮ್ಮಪ್ಪ (ಬಿ.ಕೆ)
ಕನ್ನಡ-ಮಲಯಾಳ ಭಾಷೆಗಳಲ್ಲಿ ಅರ್ಥ ವ್ಯತ್ಯಾಸ ಹೊಂದಿದ ಸಂಸ್ಕೃತ ಶಬ್ದಗಳು [೫೮–೧. ಜೂನ್ ೧೯೭೩. ಪು. ೪೦–೪೬]

೩ ವೆಂಕಟೇಶಯ್ಯ (ಎಂ.ಜಿ)
ಹಳಗನ್ನಡ ಶಾಸನವರ್ಣ ಪುನರಾವೃತ್ತಿ [೫೮–೧. ಜೂನ್ ೧೯೭೩. ಪು. ೧–೨೩]

ಲಿಪಿ:

೪ ಕಲ್ಲೂರ (ಕೃಷ್ಣಕುಮಾರ)
ಕನ್ನಡ ಲಿಪಿಯ ಸುಧಾರಣೆ [೬೦–೨. ಡಿಸೆಂ. ೧೯೭೫. ಪು. ೩೩–೪೯]

೫ ಚಿದಾನಂದಮೂರ್ತಿ (ಎಂ)
ಶಾಸನಗಳಲ್ಲಿ 'ಟ್' ಸ್ವನಿಮಕ್ಕೆ ಸಂಬಂಧಿಸಿದ ಒಂದು ಲಿಪಿ ಸಮಸ್ಯೆ ಮತ್ತು ಕೇಶಿರಾಜ [೬೨, ೧–೨. ಜೂನ್–ಡಿಸೆಂ. ೧೯೭೭. ಪು. ೧೩೦–೧೪೩]

ಶಬ್ದಾರ್ಥ:

೬ ಐತಾಳ (ಕೆ. ಶಿವರಾಮ)
ಗೊಡ್ಡ, ಮೆಟ್ಟಿಡು–ಇತ್ಯಾದಿ [೬೩–೨. ಡಿಸೆಂ. ೧೯೭೮. ಪು. ೭೧–೭೬]

೭ ಕಲಬುರ್ಗಿ (ಎಂ. ಎಂ)
ಕೆಸರ ಕಡಿತ (ಪಂಪಭಾರತ. ೧೦–೫೩) [೬೬–೧. ಜೂನ್ ೧೯೮೧. ಪು. ೪೫–೪೭]

೮ ಕುರಿಯ (ಆತ್ಮಾರಾಮಶಾಸ್ತ್ರಿ)
ಕೆಲವು ತುಳು ಶಬ್ದಗಳ ಮೂಲಗಳು [೫೭–೧. ಜೂನ್ ೧೯೭೨. ಪು. ೪೯–೬೭]

೯ ಗಾಯತ್ರೀದೇವಿ (ಎಸ್)
ಚಿಕ್ಕುಂಬೊತ್ತು ದೊಡ್ಡುಂಬೊತ್ತು—ಒಂದು ಭಾಷಿಕ ಟಿಪ್ಪಣಿ [೬೩-೧. ಜೂನ್ ೧೯೭೮. ಪು. ೭೨-೭೫]

೧೦ ನಾಗರಾಜಯ್ಯ (ಹಂಪ)
ಎದೆ—ಒಂದು ಸಣ್ಣ ಟಿಪ್ಪಣಿ [೫೭-೧. ಜೂನ್ ೧೯೭೨. ಪು. ೪೨-೪೫]

೧೧ —
ಕೀರ್ತಿ-ಒಂದು ವಿವೇಚನೆ [೫೬-೨. ಡಿಸೆಂ. ೧೯೭೧. ಪು. ೬೨-೬೮]

೧೨ —
ಸಂಚಿವಾರ (ಪೊನ್ನ ಕವಿಯ 'ಶಾಂತಿಪುರಾಣ'ದಲ್ಲಿಯ ಪ್ರಯೋಗ) —ಶಬ್ದಾರ್ಥ ಜಿಜ್ಞಾಸೆ [೬೬-೨ ; ೬೭-೧. ಪು. ೧೦-೧೪]

೧೩ —
ಸಕಾರ : / ಸ್ / [೫೯-೧. ಜೂನ್ ೧೯೭೪. ಪು. ೩೯-೪೬]

೧೪ ವೆಂಕಟಸುಬ್ಬಯ್ಯ (ಜಿ)
ಅಜ್ಜರ [=ಅಜ್ಜೆಱು ?] ಎಂದರೇನು ? (ಒರೆಗಲ್ಲಿಗೆ ಉತ್ತರ) [೫೯-೨. ಡಿಸೆಂ. ೧೯೭೪. ಪು. ೭೬-೭೯]

ವ್ಯಾಕರಣ :

೧೫ ಐತಾಳ (ಕೆ. ಶಿವರಾಮ)
ಕನ್ನಡದಲ್ಲಿ ಕರ್ಮಣಿ [೬೩-೧. ಜೂನ್ ೧೯೭೮. ಪು. ೭೦-೭೧]

೧೬ ಜಾಗೀರ್‌ದಾರ್ (ಸೀತಾರಾಮ)
ಕನ್ನಡ ವರ್ಣಗಳು—ಒಂದು ವಿವೇಚನೆ [೫೭-೨. ಡಿಸೆಂ. ೧೯೭೨. ಪು. ೧-೧೫]

೧೭ —
ಶಬ್ದಮಣಿದರ್ಪಣದ ಮೂರು ಉದಾಹರಣೆಗಳು ಹಾಗೂ ಕವಿ ಸರಸ್ವತೀ ಮಣಿಹಾರ [೬೨, ೧-೨. ಜೂನ್/ಡಿಸೆಂ. ೧೯೭೭. ಪು. ೭೫-೮೧]

೧೮ ನಾಗರಾಜಯ್ಯ (ಹಂಪ)
ಮೂಲದ್ರಾವಿಡದಲ್ಲಿ ಸ್ವರವ್ಯವಸ್ಥೆ [೫೬-೧. ಜೂನ್ ೧೯೭೧. ಪು. ೩೫-೫೬]

೧೯ ಬಸವರಾಜು
ಶಬ್ದಮಣಿದರ್ಪಣ : ಸಮಸ್ಯೆಗಳು—೧ : ಆವಿಷ್ಟಲಿಂಗ [೬೩-೧. ಜೂನ್ ೧೯೭೮. ಪು. ೭೫-೭೯]

೨೦ ಭಟ್ಟ (ಎಸ್. ಶಂಕರನಾರಾಯಣ)
ಕೊಡವ-ಕನ್ನಡ ವಿಭಕ್ತಿ ಪ್ರತ್ಯಯಗಳು (ತೌಲನಿಕ ವ್ಯಾಕರಣ ಸಮೀಕ್ಷೆ).
[೬೩-೧. ಜೂನ್ ೧೯೭೮. ಪು. ೩೭-೬೪]

೨೧ ಭಟ್ಟ (ಡಿ. ಎನ್. ಶಂಕರ)
ಆತ್ಮಾರ್ಥಕ ಮತ್ತು ಕರ್ಮಣಿ [೬೩-೨. ಡಿಸೆಂ. ೧೯೭೮. ಪು. ೧೦೩-೧೦೪]

## ಛಂದಸ್ಸು

೨೨ ಚಂದ್ರಮೌಳಿ (ಎಂ. ಆರ್)
ದಂಡಕ—ಒಂದು ಅಧ್ಯಯನ [೬೨,೧-೨. ಜೂನ್/ಡಿಸೆಂ. ೧೯೭೭ ಪು. ೫೦-೭೪]

೨೩ ವೆಂಕಟೇಶಯ್ಯ (ಎಂ.ಜಿ)
ಕನ್ನಡ ಚಂಪೂ ಕಾವ್ಯ (ಷಡಕ್ಷರ ದೇವನ 'ರಾಜಶೇಖರ ವಿಳಾಸ'ದ ಛಂದಸ್ಸು)—ಛಂದಸ್ಸು [೫೬-೨. ಡಿಸೆಂ. ೧೯೭೧. ಪು. ೫-೨೬]

೨೪ —
ನೇಮಿನಾಥ ಪುರಾಣಂ ಕಾವ್ಯದ ಛಂದಸ್ಸಿನ ವಿಚಾರ [೬೬-೧. ಜೂನ್ ೧೯೮೧. ಪು. ೮೫-೯೫]

೨೫ —
ಸೋಮರಾಜನ ಉದ್ಭಟ ಕಾವ್ಯದ ಛಂದಸ್ಸಿನ ವಿಚಾರ [೫೯-೧. ಜೂನ್ ೧೯೭೪. ಪು. ೪೭-೬೧]

## ಅಲಂಕಾರ

೨೬ ಕೃಷ್ಣಮೂರ್ತಿ (ಕೆ)
ರಸವು 'ಪ್ರತೀತಿ'ಯೋ 'ಪ್ರತೀತಿ ವಿಷಯ'ವೋ [೫೯-೨. ಡಿಸೆಂ. ೧೯೭೪. ಪು. ೮೦-೮೯]

೨೭ ಕೃಷ್ಣಶರ್ಮ (ಯು)
ಅನ್ವಯ ಜಿಜ್ಞಾಸೆ [೫೮-೧. ಜೂನ್ ೧೯೭೩. ಪು. ೩೭-೩೯]

೨೮ —
ಧ್ವನಿಯೆಂಬುದಳಂಕಾರಂ [೬೧-೨. ಡಿಸೆಂ. ೧೯೭೬. ಪು. ೨೪-೩೪]

೨೯ ಸೀತಾರಾಮಯ್ಯ (ಎಂ.ವಿ)
ಅನ್ವಯ ಜಿಜ್ಞಾಸೆ—ಪ್ರತಿಕ್ರಿಯೆ [೫೮-೨. ಡಿಸೆಂ. ೧೯೭೩. ಪು. ೪೩-೪೪]

## ಜನಪದ ಸಾಹಿತ್ಯ

೩೦ ಕೃಷ್ಣಮೂರ್ತಿ (ಎ) ಸಂ.
ಈರ ಸಿರಿಯಣ್ಣ (ವೀರ ಜನಪದ ಗೀತೆ) [೬೧–೨. ಡಿಸೆಂ. ೧೯೭೬. ಪು. ೬೧–೭೭]

೩೧ ಬ್ಯಾತನಾಳ (ಎಸ್.ಎಸ್)
ಹೋಳಿ–ಸಂಪ್ರದಾಯ [೬೬–೧. ಜೂನ್ ೧೯೮೧. ಪು. ೭೩–೮೪]

೩೨ ಲತ್ತೆ (ಮಲ್ಲಿಕಾರ್ಜುನ ಶಿ.)
ಕನ್ನಡದಲ್ಲಿ ಲಾವಣಿ [೬೬–೧. ಜೂನ್ ೧೯೮೧. ಪು. ೫೯–೬೬]

೩೩ ಲಿಂಗಯ್ಯ (ಡಿ)
ಬೋರೆದೇವರು (ಒಂದು ಅಭ್ಯಾಸ) [೫೮–೨. ಡಿಸೆಂ. ೧೯೭೩. ಪು. ೧೦–೩೧; ೫೯–೧. ಜೂನ್ ೧೯೭೪. ಪು. ೧೩–೩೮]

೩೪ —
ಮಾಸ್ತಿ ಪೂಜೆ (ಒಂದು ಜನಪದ ಸಂಪ್ರದಾಯ) [೫೭–೧. ಜೂನ್ ೧೯೭೨. ಪು. ೨೭–೩೨]

## ಸಾಹಿತ್ಯ

### (ಸಾಮಾನ್ಯ)

೩೫ ನಿಸಾರ್ ಅಹಮದ್ (ಕೆ.ಎಸ್)
ಮುಂಬೈ ಕನ್ನಡಿಗರ ಸಾಹಿತ್ಯ ಸಮ್ಮೇಳನದ ಅಂತರ್ಭಾರತಿ ಕವಿಗೋಷ್ಠಿಯ ಅಧ್ಯಕ್ಷ ಭಾಷಣ [೬೬–೨; ೬೭–೧. ಡಿಸೆಂ. ೧೯೮೧ ಮತ್ತು ಜೂನ್ ೧೯೮೨. ಪು. ೧–೯]

೩೬ ಬುರ್ಲಿ (ಅನಂತ)
ಶಿಕ್ಷಣದಲ್ಲಿ ಸಾಹಿತ್ಯಾಭ್ಯಾಸ [೫೭–೧. ಜೂನ್ ೧೯೭೨. ಪು. ೪೬–೫೮]

೩೭ ಭಟ್ (ಯು. ವಾಸುದೇವ)
ಸಾಹಿತ್ಯ ಸೌಂದರ್ಯ [೫೭–೧. ಜೂನ್ ೧೯೭೨. ಪು. ೭೮–೮೪]

೩೮ ರಾಜಗೋಪಾಲ (ಕ. ವೆಂ)
ಸಾಹಿತ್ಯೋದ್ದೇಶದ ವಿವೇಚನೆ [೬೩–೨. ಡಿಸೆಂ. ೧೯೭೮. ಪು. ೧–೧೦]

೩೯ ವೆಂಕಟೇಶಯ್ಯ (ಎಂ. ಜಿ)
ಶೈಲಿ-ರೀತಿ [೬೦-೧. ಜೂನ್ ೧೯೭೫. ಪು. ೧-೨೨]

೪೦ ವೇಣುಗೋಪಾಲರಾವ್ (ಎ.ಎಸ್)
ಕಾವ್ಯದ ದಾರಿ [೫೯-೨. ಡಿಸೆಂ. ೧೯೭೪. ಪು. ೧-೭]

೪೧ —
ಮಹಾಕಾವ್ಯಗಳಲ್ಲಿ ಸಂಗ್ರಹ ಕುಶಲತೆ ಮತ್ತು ವಿಸ್ತಾರ ವೈಭವ [೬೧-೧. ಜೂನ್ ೧೯೭೬. ಪು. ೧-೧೨]

೪೨ ಶರ್ಮ (ಎನ್. ರಂಗನಾಥ)
ರೀತಿರಾತ್ಮಾ ಕಾವ್ಯಸ್ಯ [೫೯-೨. ಡಿಸೆಂ. ೧೯೭೪. ಪು. ೫೩-೬೪]

## ಕನ್ನಡ ಸಾಹಿತ್ಯ

೪೩ ಆಳ್ವ (ಚಿರಂಜೀವಿ)
ಕರ್ನಾಟಕದ ಕಣ್ಮಣಿಗಳು [೬೬-೨; ೬೭-೧. ಡಿಸೆಂ. ೧೯೮೧ ಮತ್ತು ಜೂನ್ ೧೯೮೨. ಪು. ೨೭-೫೮]

೪೪ ಉಡುಪ (ಎನ್. ಶ್ರೀನಿವಾಸ)
ಹೊಸಗನ್ನಡ ಸಾಹಿತ್ಯದಲ್ಲಿ ಅಹಲ್ಯೆಯ ಮೂರು ಚಿತ್ರಗಳು [೬೩-೨. ಡಿಸೆಂ. ೧೯೭೮. ಪು. ೧೧-೨೨]

೪೫ ಗುಂಡಾಜೋಯಿಸ (ಕೆಳದಿ)
ಸಾಗರದ ಕವಿ ಲಿಂಗಣ್ಣಯ್ಯನವರ ಕಲಾಸೇವೆ [೬೫, ೧-೨. ಜೂನ್/ಡಿಸೆಂ. ೧೯೮೦. ಪು. ೧೦೫-೧೧೩]

೪೬ ಗೋವಿಂದರಾಜು (ಎಂ. ಜಿ)
ಕನ್ನಡದಲ್ಲಿ ಮಕ್ಕಳ ಸಾಹಿತ್ಯ
[೬೫, ೧-೨. ಜೂನ್/ಡಿಸೆಂ. ೧೯೮೦. ಪು. ೧-೨೦]

೪೭ ಮಹಮೂದ್ (ಟಿ. ಕೆ)
ದಲಿತ ಸಾಹಿತ್ಯದ ಒಲವು-ನಿಲುವು [೬೪, ೧-೨. ಜೂನ್/ಡಿಸೆಂ. ೧೯೭೯. ಪು. ೫೨-೫೭]

೪೮ ರಾಜಗೋಪಾಲಾಚಾರ್ಯ (ಎಂ)
ಕನ್ನಡ ಕಾವ್ಯಗಳಲ್ಲಿ ಒಗಟುಗಳು ಮತ್ತು ಪ್ರಹೇಳಿಕೆಗಳು [೬೨, ೧-೨. ಜೂನ್/ಡಿಸೆಂ. ೧೯೭೭. ಪು. ೧೪೪-೧೫೮]

೪೯ ಶ್ರೀಕಂಠಯ್ಯ (ಕೆ)
ಕನ್ನಡ ಕಾವ್ಯಗಳಲ್ಲಿ ತಾಂಬೂಲ ಚರ್ವಣ [೬೬-೧. ಜೂನ್ ೧೯೮೧. ಪು. ೨೬-೩೪]

೫೦ —
ಕವಿಗಳು ಕಂಡ ಕೃಷಿರಂಗ [೬೭-೨. ಡಿಸೆಂ. ೧೯೮೨. ಪು. ೩೮-೫೫]

೫೧ ಶ್ರೀಧರ (ಬಿ.ಎಚ್)
ಕನ್ನಡತ್ರಯು ವಿಭಾಗಯೋಗ [೬೨, ೧-೨. ಜೂನ್/ಡಿಸೆಂ. ೧೯೭೭. ಪು. ೧೧೩-೧೨೯]

## ವಚನ ಸಾಹಿತ್ಯ :

೫೨ ಕುಷ್ಟಗಿ (ವಸಂತ)
ಶರಣ ಸಾಹಿತ್ಯ-ದಾಸ ಸಾಹಿತ್ಯ [೬೦-೧. ಜೂನ್ ೧೯೭೫. ಪು. ೨೩-೪೨]

೫೩ ನಾರಾಯಣ (ಪಿ.ವಿ)
ವಚನಗಳಲ್ಲಿ ತೊತ್ತು ವಿಚಾರ [೬೨, ೧-೨ ಜೂನ್/ಡಿಸೆಂ. ೧೯೭೭. ಪು. ೧೫೯-೧೭೧]

೫೪ ರಾಮಸ್ವಾಮಿ (ಎಂ. ಆರ್)
ವಚನಕಾರರಲ್ಲಿ ಕಾಯಕದ ಕಲ್ಪನೆ [೫೭-೧. ಜೂನ್ ೧೯೭೨. ಪು. ೬೮-೭೭]

## ಗ್ರಂಥ ಸಂಪಾದನೆ :

೫೫ ಚಿದಾನಂದಮೂರ್ತಿ (ಎಂ)
ಗ್ರಂಥ ಸಂಪಾದನೆ [೬೧-೧. ಜೂನ್ ೧೯೭೬. ಪು. ೧೩-೨೪]

೫೬ ನಾಗರಾಜಯ್ಯ (ಹಂಪ)
ಕನ್ನಡ ಗ್ರಂಥ ಸಂಪಾದನೆಗೆ ಪರಿಷತ್ತಿನ ಕೊಡುಗೆ [೬೫, ೧-೨. ಜೂನ್/ಡಿಸೆಂ. ೧೯೮೦. ಪು. ೮೭-೧೦೪]

# ಕನ್ನಡ ಕವಿ-ಕಾವ್ಯ ವಿಮರ್ಶೆ
## (ಪ್ರಾಚೀನ)

## ಅಕ್ಕನಾಗಮ್ಮ :

೫೭ ಶಿರಹಟ್ಟಿ (ಲಕ್ಕಪ್ಪ ಅ.)
ಅಕ್ಕನಾಗಮ್ಮನ ಜೀವನ ಮತ್ತು ಸಾಹಿತ್ಯ [೬೦-೨. ಡಿಸೆಂ. ೧೯೭೫. ಪು. ೬೧-೭೭]

ಅರ್ಹದ್ದಾಸ :

೫೮ ಜಾಗೀರ್‌ದಾರ್ (ಸೀತಾರಾಮ)
ಅರ್ಹದ್ದಾಸನ ಕಾಲ ವಿಚಾರ [೫೮-೨. ಡಿಸೆಂ. ೧೯೭೩. ಪು. ೧-೯] [೬೩-೨. ಡಿಸೆಂಬರ್ ೧೯೭೮. ಪು. ೯೯-೧೦೨]

೫೯ —
ಅರ್ಹದ್ದಾಸನ ಕಾಲ ವಿಚಾರ—ಉತ್ತರಕ್ಕೆ ಉತ್ತರ [೬೬-೧. ಜೂನ್ ೧೯೮೧. ಪು. ४३-४४]

ಕುಮಾರವ್ಯಾಸ :

೬೦ ಅಣಜಿ (ಸಿ.ಆರ್)
ವೀರನಾರಾಯಣನೆ ಕವಿ-ಏಕಿರಬಹುದು? [೬೭-೨. ಡಿಸೆಂ. ೧೯೮೨. ಪು. ೨೯-೩೩]

೬೧ ಉಡುಪ (ಎನ್. ಗೋಪಾಲಕೃಷ್ಣ)
ರವಿಸುತನ ಕಿವಿಯಲಿ ಬಿತ್ತಿದನು ಭಯವ (ಉದ್ಯೋಗ ಪರ್ವ) [೬೪, ೧-೨. ಜೂನ್/ಡಿಸೆಂ. ೧೯೭೯. ಪು. ೮-೧೮]

೬೨ ವೇಣುಗೋಪಾಲರಾವ್ (ಎ.ಎಸ್)
ಭೀಮವಲ್ಲಭೆಯ ಉತ್ತರೋತ್ತರ [೫೮-೨. ಡಿಸೆಂ. ೧೯೭೩. ಪು. ೩೨-೪೨]

ಕೊಂಡಲಗಿರಿ :

೬೩ ಮಹಾಂತಯ್ಯ (ಎಂ. ಎಸ್.)
ರಸಿಕ ಮನೋರಂಜನ ಮಹಾಪ್ರಬಂಧಂ (ಒಂದು ರಸಮೀಮಾಂಸೆ) [೫೭-೨. ಡಿಸೆಂ. ೧೯೭೨. ಪು. ೧೬-೨೩]

ಗೋಪಾಲದಾಸ :

೬೪ ಗೋಕುಲನಾಥ್ (ಕೆ)
ಶ್ರೀ ಗೋಪಾಲದಾಸರಿಗೆ ಅಂಕಿತವಾದ ಸ್ಥಳ [೬೨, ೧-೨. ಜೂನ್/ಡಿಸೆಂ. ೧೯೭೭. ಪು. ೧೭೨-೧೭೭]

ಚಂದ್ರಸಾಗರವರ್ಣಿ :

೬೫ ನಾಗರಾಜಯ್ಯ (ಹಂಪ)
ಚಂದ್ರಸಾಗರವರ್ಣಿ [೫೮-೨. ಡಿಸೆಂ. ೧೯೭೩. ಪು. ೬೪-೭೭]

### ಜನ್ನ :

೬೬ ಪಾಟೀಲ (ಎಸ್.ಪಿ)
ಜನ್ನನ 'ಯಶೋಧರ ಚರಿತೆ' [೬೦-೧. ಜೂನ್ ೧೯೭೫. ಪು. ೬೫-೭೫]

೬೭ ವಾಮನರಾವ್ (ಕೆ)
ಯಶೋಧರ ಚರಿತೆಯಲ್ಲಿ ಜನ್ನನ ಸ್ವೋಪಜ್ಞತೆ [೬೨, ೧-೨. ಜೂನ್/ಡಿಸೆಂ. ೧೯೭೭. ಪು. ೧-೩೧]

### ತೋಂಟದ ಸಿದ್ಧಲಿಂಗಯತಿ :

೬೮ ಕಲಬುರ್ಗಿ (ಎಂ.ಎಂ)
ತೋಂಟದ ಸಿದ್ಧಲಿಂಗಯತಿಗಳ ಕಾಲ [೬೩-೧. ಜೂನ್ ೧೯೭೮. ಪು. ೨೮-೩೩]

### ದೇವರ ದಾಸಿಮಯ್ಯ :

೬೯ ಜಾಗೀರ್‌ದಾರ್ (ಸೀತಾರಾಮ)
ದೇವರ ದಾಸಿಮಯ್ಯನ ಕಾಲ ವಿಚಾರ [೫೯-೧. ಜೂನ್ ೧೯೭೪. ಪು. ೧-೬]

೭೦ ಲಿಂಗಯ್ಯ (ಡಿ)
ದೇವರ ದಾಸಿಮಯ್ಯನ ಸಾಮಾಜಿಕ ಕ್ರಾಂತಿ [೬೧-೧. ಜೂನ್ ೧೯೭೬. ಪು. ೬೯-೭೫]

### ನಯಸೇನ :

೭೧ ಜಯಚಂದ್ರ (ಎಂ.ಎ)
ಧನಕೀರ್ತಿಯ ಕಥೆ—ಒಂದು ವಿವೇಚನೆ [೬೬-೧. ಜೂನ್ ೧೯೮೧. ಪು. ೩೫-೩೮]

### ನಾಗಚಂದ್ರ :

೭೨ ಶ್ರೀನಿವಾಸನ್
ನಾಗಚಂದ್ರನ ಕಾವ್ಯಪ್ರಜ್ಞೆ [೫೮-೨. ಡಿಸೆಂ. ೧೯೭೩. ಪು. ೭೮-೮೮]

## ನಾಗವರ್ಮ :

೭೩ ಕೃಷ್ಣಮೂರ್ತಿ (ಕೆ)
ನಾಗವರ್ಮನ ಕಾವ್ಯಾವಲೋಕನದ ಕಾವ್ಯಲಕ್ಷಣ: ಒಂದು ಟಿಪ್ಪಣಿ [೫೮–೨. ಡಿಸೆಂ. ೧೯೭೩. ಪು. ೪೫–೪೭]

೭೪ ದೀಕ್ಷಿತ (ಮಾರ್ತಾಂಡ)
ನಾಗವರ್ಮನ ಕಾವ್ಯಲಕ್ಷಣ ವಿಮರ್ಶೆ [೫೯–೨. ಡಿಸೆಂ. ೧೯೭೪. ಪು. ೮–೨೩]

೭೫ ವೆಂಕಟೇಶಯ್ಯ (ಎಂ.ಜಿ)
ಇಬ್ಬರು ನಾಗವರ್ಮರ ವಿಚಾರ [೬೭–೨. ಡಿಸೆಂ. ೧೯೮೨. ಪು. ೧೨–೨೮]

೭೬ ಶರ್ಮ (ಎನ್. ರಂಗನಾಥ)
ನಾಗವರ್ಮನ ಕಾವ್ಯಲಕ್ಷಣ [೫೮–೨. ಡಿಸೆಂ. ೧೯೭೩. ಪು. ೪೮–೫೨]

## ನಾಗವರ್ಮ (ಎರಡನೆಯ):

೭೭ ಸೀತಾರಾಮಯ್ಯ (ಎಂ.ವಿ)
ಎರಡನೆಯ ನಾಗವರ್ಮನ ಕಾಲ ವಿಚಾರ [೬೦–೨. ಡಿಸೆಂ. ೧೯೭೫. ಪು. ೧–೧೧]

## ನೃಪತುಂಗ :

೭೮ ಜಾಗೀರ್‌ದಾರ್ (ಸೀತಾರಾಮ)
ಕವಿರಾಜಮಾರ್ಗದ ಕರ್ತೃ [೬೭–೨. ಡಿಸೆಂ. ೧೯೮೨. ಪು. ೧–೧೧]

## ಪಂಪ :

೭೯ ಆರಾಧ್ಯ (ಯು.ಎಸ್. ಶ್ರೀಧರ)
ಪಂಪನ ಧ್ವನಿಶಕ್ತಿ [೬೭–೨. ಡಿಸೆಂ. ೧೯೮೨. ಪು. ೩೪–೩೭]

೮೦ ಜಾಗೀರ್‌ದಾರ್ (ಸೀತಾರಾಮ)
ಪಂಪಕವಿಯ ಇತಿವೃತ್ತದ ವಿಚಾರ (೨) [೫೬–೧. ಜೂನ್ ೧೯೭೧. ಪು. ೧–೨೯]

ಆದಿಪುರಾಣ :

೮೧ ಉಪಾಧ್ಯೆ (ಆ.ನೇ)
ಆದಿಪುರಾಣದ ಎರಡು ಶ್ಲೋಕಗಳ ಅರ್ಥ [೫೬–೨. ಡಿಸೆಂ. ೧೯೭೧. ಪು. ೧–೪]

೮೨ — ಆದಿಪುರಾಣದ ಎರಡು ಪದ್ಯಗಳ ಅರ್ಥದ ಔಚಿತ್ಯ [೫೮–೧. ಜೂನ್ ೧೯೭೩. ಪು. ೬೭–೭೩]

೮೩ ಜಾಗೀರ್‌ದಾರ್ (ಸೀತಾರಾಮ)
ಆದಿಪುರಾಣದ ಎರಡು ಪದ್ಯಗಳು (ಆಶ್ವಾಸ ೧೬. ಪದ್ಯ ೩೫, ೩೬)—ಶ್ರೀ ಉಪಾಧ್ಯಾಯರ ವಿವರಣೆಯು [೫೭–೧. ಜೂನ್ ೧೯೭೨. ಪು. ೩೩–೩೫]

೮೪ —ಆದಿಪುರಾಣ ಮತ್ತು ಶುಭನಂದಿ [೫೮–೧. ಜೂನ್ ೧೯೭೩. ಪು. ೭೪–೭೮]

೮೫ ದೇಸಾಯಿ (ಪಿ.ಬಿ)
ಆದಿಪುರಾಣ ಮತ್ತು ಶುಭನಂದಿ [೫೭–೧. ಜೂನ್ ೧೯೭೨. ಪು. ೩೬–೪೧]

೮೬ ವಸಂತರಾಜ್ (ಎಂ.ಡಿ)
ಆದಿಪುರಾಣದ ಎರಡು ಪದ್ಯಗಳು (ಆಶ್ವಾಸ ೧೬. ಪದ್ಯ ೩೫, ೩೬) [೫೮–೧. ಜೂನ್. ೧೯೭೩. ಪು. ೬೩–೬೬]

ಪದ್ಮರಸ (ಕೆರೆಯ) :

೮೭ ಬಸವಾರಾಧ್ಯ (ಎನ್)
ಕೆರೆಯ ಪದ್ಮರಸ [೬೩–೧. ಜೂನ್ ೧೯೭೮. ಪು. ೨೧–೨೮]

ಪಾಯಣ್ಣವ್ರತಿ :

೮೮ ಶಿವಣ್ಣ (ಎಸ್)
ಪಾಯಣ್ಣವ್ರತಿ (ಸಂಯುಕ್ತ ಕೌಮುದಿಯ ಕರ್ತೃ) [೬೭–೨. ಡಿಸೆಂ. ೧೯೮೨. ಪು. ೧೪೦]

ಪೊನ್ನ :

೮೯ ಕಲಬುರ್ಗಿ (ಎಂ.ಎಂ)
ಪೊನ್ನನ ಭುವನೈಕ ರಾಮಾಭ್ಯುದಯ : ಒಂದು ಅಲಂಕಾರ ಶಾಸ್ತ್ರ ? [೬೭–೨. ಡಿಸೆಂ. ೧೯೮೨. ಪು. ೧೩೮–೧೩೯]

ಮಹಾದೇವ :

೯೦ ಅರ್ತಿಕಜೆ (ಶ್ರೀಕೃಷ್ಣ)
ಬ್ರಹ್ಮೋತ್ತರ ಖಂಡ-ಷಟ್ಪದಿ ಕಾವ್ಯ [೬೩-೧. ಜೂನ್ ೧೯೭೮. ಪು.೧-೨೦]

ಮುಖಬೋಳು ಸಿದ್ಧರಾಮ :

೯೧ ಶಿವಣ್ಣ (ಎಸ್)
ಮುಖಬೋಳು ಸಿದ್ಧರಾಮ (ಕವಿ-ಕೃತಿ-ಕಾಲ ವಿಚಾರ) [೬೩-೧. ಜೂನ್ ೧೯೭೮. ಪು. ೩೪-೩೬]

ರನ್ನ :

೯೨ ಕಲಬುರ್ಗಿ (ಎಂ.ಎಂ)
ಗದಾಯುದ್ಧದ ಒಂದು ಪದ್ಯ ("ಪಸಿವಿಸಿನೊಳನ್ನಮುಂ ಪಸಿದು ಬಂದ ವರ್ಗಿಕ್ಕುವ ಯುದ್ಧರಂಗದೊಳ್") [೬೫, ೧-೨. ಜೂನ್/ಡಿಸೆಂ. ೧೯೮೦. ಪು. ೩೦-೩೩]

೯೩ ಕುಲಕರ್ಣಿ (ಬಿ.ಎಸ್)
ಸಾಂಸ್ಕೃತಿಕ ಪರಿಸರದಲ್ಲಿ ಕವಿರನ್ನ. [೬೬-೧. ಜೂನ್ ೧೯೮೧. ಪು. ೪೮-೫೮]

೯೪ ಕೃಷ್ಣ (ಸು)
ಗದಾಯುದ್ಧದ ಒಂದು ಪದ್ಯ-ಒಂದು ಪ್ರತಿಕ್ರಿಯೆ [೬೬-೧. ಜೂನ್ ೧೯೮೧. ಪು. ೩೯-೪೨]

ಲಕ್ಷ್ಮೀಶ :

೯೫ ಜಾಗೀರ್‌ದಾರ್ (ಸೀತಾರಾಮ)
ಕನ್ನಡ ಜೈಮಿನಿ ಭಾರತದ ಒಂದು ಪದ್ಯ [೬೦-೧. ಜೂನ್ ೧೯೭೫. ಪು. ೭೬-೮೦]

೯೬ ಶಿವಶಂಕರ್ (ಚಕ್ಕೆರೆ)
ಲಕ್ಷ್ಮೀಶನ ಜೈಮಿನಿ ಭಾರತದಲ್ಲಿ ವ್ಯಕ್ತವಾದ ಕೃಷ್ಣಭಕ್ತಿ [೬೭-೨. ಡಿಸೆಂ. ೧೯೮೨. ಪು. ೫೬-೬೧]

### ಶಿವಕೋಟ್ಯಾಚಾರ್ಯ :

೯೭ ನಾಗರಾಜಯ್ಯ (ಹಂಪ)
ವಡ್ಡಾರಾಧನೆ ಮತ್ತು ಚಾವುಂಡರಾಯ ಪುರಾಣ [೬೬–೧. ಜೂನ್ ೧೯೮೧. ಪು. ೬೭–೭೨]

೯೮ —
ವಡ್ಡಾರಾಧನೆಯ ಪಾಠಾಂತರಗಳು [೬೭–೨. ಡಿಸೆಂ. ೧೯೮೨. ಪು. ೧೩೨–೧೩೭]

### ಶಿವಯೋಗಿ (ಪರ್ವತ) :

೯೯ ಶಿವಣ್ಣ (ಎಸ್)
ಪರ್ವತ ಶಿವಯೋಗಿ: ಕಾಲವಿಚಾರ ಮತ್ತು ಕವಿಚರಿತೆಯ ಕೆಲವು ಅನುಕ್ತ ಕೃತಿಗಳು [೬೧–೧. ಜೂನ್ ೧೯೭೬. ಪು. ೮೬–೮೮]

### ಶಿಶುನಾಳ :

೧೦೦ ಅಕ್ಕೂರಮಠ (ಷಣ್ಮುಖಯ್ಯ)
ಶಿಶುನಾಳ ಶರೀಫರ ಅನುಭಾವ ಸಾಹಿತ್ಯ [೬೨, ೧–೨. ಜೂನ್/ಡಿಸೆಂ. ೧೯೭೭. ಪು. ೩೯–೪೯]

### ಷಡಕ್ಷರದೇವ :

೧೦೧ ಎರೇಸೀಮೆ (ಚನ್ನಪ್ಪ)
ಷಡಕ್ಷರದೇವನ ಸ್ತೋತ್ರ ಸಾಹಿತ್ಯ [೬೧–೧. ಜೂನ್ ೧೯೭೬. ಪು. ೩೬–೫೪; ೬೧–೨. ಡಿಸೆಂ. ೧೯೭೬. ಪು. ೧–೧೭]

### ಸರ್ವಜ್ಞ :

೧೦೨ ಸೀತಾರಾಮಯ್ಯ (ಎಂ. ವಿ)
ಸರ್ವಜ್ಞನ ತ್ರಿಪದಿಗಳು–ಪುನಃಪರಿಷ್ಕರಣದ ಅಗತ್ಯ [೬೦–೧. ಜೂನ್ ೧೯೭೫. ಪು. ೪೩–೫೧]

### ಸೋಮೇಶ್ವರ :

೧೦೩ ಕಲಬುರ್ಗಿ (ಎಂ. ಎಂ)
ಮಾನಸೋಲ್ಲಾಸದಲ್ಲಿ (ಅಥವಾ ಅಭಿಲಷಿತಾರ್ಥ ಚಿಂತಾಮಣಿ) ಕನ್ನಡ ಪದ್ಯಗಳು [೫೬–೧. ಜೂನ್ ೧೯೭೧. ಪು. ೩೦–೩೪]

## ವಚನಗಳು / ಕಾವ್ಯಗಳು

(ಸಂಪಾದಿತ ಕೃತಿಗಳು)

೧೦೪ ಅಲ್ಲಮ

ಅಲ್ಲಮನ ಹೆಚ್ಚಿನ ವಚನಗಳು, ಸಂ. ಎಸ್. ಉಮಾಪತಿ [೬೦–೨. ಡಿಸೆಂ. ೧೯೭೫. ಪು. ೫೮–೬೦]

೧೦೫ ಕೃಷ್ಣಾಚಾರ್ಯ (ವೈ. ವಿ)

'ಲೋಕದರ್ಪಣಂ' ಎಂಬ ನೀತಿಶತಕಂ [೫೭–೨. ಡಿಸೆಂ. ೧೯೭೨. ಪು. ೬೫–೮೬]

೧೦೬ ತಿಮ್ಮಕವಿ

ಭಕ್ತಿ ಸುಧಾರಸ, ಸಂ. ಗೋ.ವೆ.ಚುಳಕಿ [೫೬–೧. ಜೂನ್ ೧೯೭೧. ಪು. ೫೭–೬೪, ೫೬–೨. ಡಿಸೆಂ. ೧೯೭೧. ಪು. ೭೪–೯೦]

೧೦೭ ವೆಂಕಟ

ಸದಾಶಿವ ರಾಮಾಯಣ, ಸಂ. ಕೆ. ಎಸ್. ಮಧುಸೂದನ ಮತ್ತು ಹೊ. ರಾ. ಸತ್ಯನಾರಾಯಣರಾವ್ [೫೮–೨. ಡಿಸೆಂ. ೧೯೭೩.ಪು. ೫೩–೬೩]

## ಕನ್ನಡ ಕಾವ್ಯ

(ಆಧುನಿಕ)

### ನರಸಿಂಹಸ್ವಾಮಿ (ಕೆ. ಎಸ್) :

೧೦೮ ಸೊರಬ (ವೇಣುಗೋಪಾಲ)

'ದುರ್ಬಲ ವಸ್ತುವನ್ನು ಸಬಲಗೊಳಿಸುವ ಯತ್ನ' ('ತೆರೆದ ಬಾಗಿಲು') [೬೩–೨. ಡಿಸೆಂ. ೧೯೭೮]

### ನರಸಿಂಹಾಚಾರ್ (ಪು. ತಿ) :

೧೦೯ ವೇಣುಗೋಪಾಲರಾವ್ (ಎ. ಎಸ್)

ಗೋಕುಲ ನಿರ್ಗಮನ [೫೭–೨. ಡಿಸೆಂ. ೭೨. ಪು. ೨೪–೩೧]

ನಾಡಿಗ (ಸುಮತೀಂದ್ರ) :

೧೧೧೦ ಲಕ್ಷ್ಮಣರಾವ್ (ಬಿ. ಆರ್)

ಎರಡು ಕವನ ಸಂಕಲನಗಳು (ಸುಮತೀಂದ್ರ ನಾಡಿಗರ 'ಉದ್ಘಾಟನೆ ಮತ್ತು ಬಿ. ಸಿ. ರಾಮಚಂದ್ರ ಶರ್ಮರ 'ಬ್ರಾಹ್ಮಣರ ಹುಡುಗ') [೬೫, ೧-೨. ಜೂನ್ / ಡಿಸೆಂ. ೧೯೭೦. ಪು. ೩೭-೪೪]

ಪಾಟೀಲ (ಚಂದ್ರಶೇಖರ) :

೧೧೧೧ ರಘುನಾಥ್ (ಟಿ. ಎಸ್)

ಚಂದ್ರಶೇಖರ ಪಾಟೀಲರ 'ಗಾಂಧಿ ಸ್ಮರಣೆ' [೬೫, ೧-೨. ಜೂನ್/ಡಿಸೆಂ. ೧೯೭೦. ಪು. ೩೪-೩೬]

ಪುಟ್ಟಪ್ಪ (ಕೆ. ವಿ) [ಕುವೆಂಪು] :

೧೧೧೨ ಯಶೋಧರಾ (ಎಚ್. ಬಿ)

ಶ್ರೀ ರಾಮಾಯಣ ದರ್ಶನಂನಲ್ಲಿ ಪ್ರಾದೇಶಿಕತೆ [೬೭-೨. ಡಿಸೆಂ. ೧೯೭೨. ಪು. ೧೦೩-೧೩೧]

ಬೇಂದ್ರೆ (ದ. ರಾ) :

೧೧೧೩ ದೀಕ್ಷಿತ (ಚಿದಂಬರ)

ಬೇಂದ್ರೆ ಅವರ ಕವಿತೆಗಳಲ್ಲಿ ಸಾಮಾಜಿಕ ಜೀವನ [೬೫, ೧-೨. ಜೂನ್ / ಡಿಸೆಂ. ೧೯೭೦. ಪು. ೬೬-೭೯]

ರಾಜಗೋಪಾಲ (ಕ. ವೆಂ) :

೧೧೧೪ ರಾಘವ (ಟಿ. ಜಿ)

ಮೇ ತಿಂಗಳ ಒಂದು ಅಬ್ಬರ [೬೩-೨. ಡಿಸೆಂ. ೧೯೭೮. ಪು. ೯೦-೯೬]

ರಾಮಾನುಜನ್ (ಎ. ಕೆ) :

೧೧೧೫ ಜೈ ಪ್ರಕಾಶ್ (ಎಂ. ಎನ್)

ರಾಮಾನುಜನ್ ಅವರ 'ಸಾಕು' ಕವನ [೬೩-೨. ಡಿಸೆಂ. ೧೯೭೮ ಪು. ೫೯-೬೪]

## ಕನ್ನಡ ನಾಟಕಗಳು / ರಂಗಭೂಮಿ

೧೧೬ ಗಿರಡ್ಡಿ (ಗೋವಿಂದರಾಜ)
ಕನ್ನಡಿ ರಂಗಭೂಮಿಯ ಪುನರುಜ್ಜೀವನ [೬೫, ೧-೨. ಜೂನ್/ಡಿಸೆಂ.. ೧೯೮೦. ಪು. ೫೬-೬೫]

೧೧೭ ಪ್ರಭಾ (ದೇನಾಶ್ರೀ)
ಗಿರೀಶ್ ಕಾರ್ನಾಡರ ' ಹಯವದನ ' [೬೪, ೧-೨. ಜೂನ್/ಡಿಸೆಂ. ೧೯೭೯ ಪು. ೧೯-೨೯]

೧೧೮ ನರಸಿಂಹಮೂರ್ತಿ (ಆರ್)
ಪರಂಪರೆಯ ದೃಷ್ಟಿಯಲ್ಲಿ 'ಸತ್ಯಾಯನ ಹರಿಶ್ಚಂದ್ರ' [೬೧-೨. ಡಿಸೆಂ.. ೧೯೭೬. ಪು. ೭೮-೯೧]

## ಕನ್ನಡ ಕಾದಂಬರಿಗಳು / ಕಥೆಗಳು

೧೧೯ ಗೋವಿಂದರಾವ್ (ಜಿ.ಕೆ)
ಈಶ್ವರಚಂದ್ರ ಅವರ ' ಮುನಿತಾಯಿ ' (ಕಥಾಸಂಕಲನ) [೬೪, ೧-೨ ಜೂನ್/ಡಿಸೆಂ. ೧೯೭೯. ಪು. ೪೩-೫೧]

೧೨೦ ಬಾಲಸುಬ್ರಹ್ಮಣ್ಯಂ (ನರಹಳ್ಳಿ)
ಸಮೀಕ್ಷೆ(ಶಿವರಾಮ ಕಾರಂತರ ಕಾದಂಬರಿ) [೬೩, ೨. ಡಿಸೆಂ. ೧೯೭೮. ಪು. ೨೩-೩೫]

೧೨೧ ರಂಗನಾಥರಾವ್ (ಜಿ.ಎನ್)
ಮುಸ್ಸಂಜೆಯ ಕಥಾಪ್ರಸಂಗ (ಪಿ. ಲಂಕೇಶರ ಕಾದಂಬರಿ) [೬೩-೨. ಡಿಸೆಂ. ೧೯೭೮. ಪು. ೭೯-೮೯]

## ಭಾರತೀಯ ಭಾಷಾ ಸಾಹಿತ್ಯ

ಉರ್ದು :

೧೨೨ ಹಿರೇಮಠ (ಪಂಚಾಕ್ಷರಿ)
ಉರ್ದು ಸಾಹಿತ್ಯ ಹಾಗೂ ಆ ಸಾಹಿತ್ಯದಿಂದ ಕನ್ನಡಕ್ಕೆ ಬಂದ ಕೃತಿಗಳು. [೫೬-೨. ಡಿಸೆಂ. ೧೯೭೧. ಪು. ೫೨-೬೧]

## ತೆಲುಗು :

೧೨೩ ವೆಂಕಟಸುಬ್ಬರಾವ್ (ತಂಗಿರಾಲ)
ನಾಲ್ಕು ಬಗೆಯ ಹೊಸ ಕವಿತೆಗಳು (೧. ಭಾವ ಕವಿತೆ ; ೨. ಅಭ್ಯುದಯ ಕವಿತ್ವ-ಶ್ರೀ ಶ್ರೀ ; ೩. ವಚನ ಕವಿತೆ-ತಿಲಕ್ ; ೪. ದಿಗಂಬರ ಕವಿತೆ-ದಿಗಂಬರ ಕವಿಗಳು), ಅನು. ಕೆ. ಯನ್. ಜಾನಕಿರಾಮಯ್ಯ. [೫೬-೨. ಡಿಸೆಂ. ೧೯೭೧. ಪು. ೨೭-೫೧]

೧೨೪ ವೆಂಕಟೇಶಯ್ಯ (ಎಂ.ಜಿ)
ಕ್ಷೇತ್ರಯ್ಯನ ಪದಗಳು [೬೫, ೧-೨. ಜೂನ್/ಡಿಸೆಂ. ೧೯೮೦. ಪು. ೧೧೪-೧೨೮]

೧೨೫ ಶ್ರೀಕಂಠಮೂರ್ತಿ (ಜೆ.ಎನ್)
ನೆರೆಭಾಷೆಯ ಸಾಹಿತ್ಯದಲ್ಲಿ ಹೊಸ ಒಲವುಗಳು : ತೆಲುಗಿನಲ್ಲಿ [೬೪, ೧-೨. ಜೂನ್/ಡಿಸೆಂ. ೧೯೭೯. ಪು. ೩೦-೪೨]

## ಪ್ರಾಕೃತ :

೧೨೬ ಬ್ಯಾತನಾಳ (ಎಸ್.ಎಸ್)
ವಿಮಲಸೂರಿ (ಜೀವನ, ಕೃತಿ ಸಂಖ್ಯೆ, ಮತ, ಕಾಲಗಳ ಚರ್ಚೆ) [೬೩-೧. ಜೂನ್ ೧೯೭೮. ಪು. ೮೧-೯೫ ; ೬೩-೨. ಡಿಸೆಂ. ೧೯೭೮. ಪು. ೬೭-೭೦ ; ೬೪, ೧-೨. ಜೂನ್/ಡಿಸೆಂ. ೧೯೭೯. ಪು. ೮೧-೯೫]

## ವಂಗ :

೧೨೭ ನರೇಗಲ್ಲ (ಪ್ರಹ್ಲಾದ)
ಬಂಗಾಳಿ ವಾಙ್ಮಯದಲ್ಲಿ ಇಂದಿನ ಒಲವುಗಳು [೫೮-೧. ಜೂನ್ ೧೯೭೩. ಪು. ೪೭-೫೫]

## ಸಂಸ್ಕೃತ :

೧೨೮ ಕೃಷ್ಣಮೂರ್ತಿ (ಕೆ)
ಕನ್ನಡಕ್ಕೆ ಹಿನ್ನೆಲೆಯಾದ ಸಂಸ್ಕೃತ ಕಾವ್ಯಗಳು [೫೮-೧. ಜೂನ್ ೧೯೭೩. ಪು. ೫೬-೬೨]

೧೨೯ —
ಕನ್ನಡದಲ್ಲಿ ಸಂಸ್ಕೃತ ನಾಟಕಗಳು [೬೬-೧. ಜೂನ್ ೧೯೮೧. ಪು. ೧-೨೫]

೧೩೦ ಕೃಷ್ಣಶರ್ಮ (ಯ)
ಮಹಾಭಾರತದಲ್ಲಿ ಮಹಿಳೆ [೫-೧. ಜೂನ್ ೧೯೭೪. ಪು. ೬೯-೯೦ ;
೫-೨. ಡಿಸೆಂ. ೧೯೭೪. ಪು. ೩೪-೩೮]

೧೩೧ —
ಮಹಾಭಾರತ ಯುದ್ಧ ಮತ್ತು ಮಹಿಳೆ [೬೦-೨. ಡಿಸೆಂ. ೧೯೭೩.
ಪು. ೭೮-೯೧]

೧೩೨ ವಿದ್ಯಾಶಂಕರ (ಎಸ್)
ಸಂಸ್ಕೃತ 'ಶಿವರಹಸ್ಯ'ದಲ್ಲಿ ನಂಬಿಯಣ್ಣನ ಕಥೆ [೬೭-೨. ಡಿಸೆಂ. ೧೯೮೨.
ಪು. ೬೨-೯೩]

೧೩೩ ವಿಮಲ (ಎನ್. ವಿ)
ಸಂಸ್ಕೃತ ಸಾಹಿತ್ಯದಲ್ಲಿ ಋಷ್ಯಾಶ್ರಮ ವರ್ಣನೆ ಮತ್ತು ಜೀವನ ವೈಶಿಷ್ಟ್ಯ
[೫೭-೧. ಜೂನ್ ೧೯೭೨. ಪು. ೧-೨೬]

೧೩೪ ವೀರಭದ್ರಪ್ಪ (ಬಿ.ವಿ)
ಕಮಲ ಕಾಣಿಕೆ (ಶೂದ್ರಕವಿಯ 'ಪದ್ಮಪ್ರಾಭೃತಕ'ದ ಕನ್ನಡ ರೂಪ-ಒಂದು
ಏಕ ನಟ, ಏಕಾಂಕ ನಾಟಕ) [೫೬-೨. ಡಿಸೆಂ. ೧೯೭೧. ಪು. ೬೯-೭೩]

ಹಿಂದೀ :

೧೩೫ ನಾಗರತ್ನ (ಆರ್)
ಬಹುಮುಖ ಪ್ರತಿಭೆಯ ಪ್ರೇಮಚಂದ್ [೬೫, ೧-೨. ಜೂನ್/ಡಿಸೆಂ.
೧೯೮೦. ಪು. ೪೯-೫೫]

## ಅನ್ಯ ದೇಶೀಯ ಸಾಹಿತ್ಯ

ಆಂಗ್ಲ :

೧೩೬ ಕೃಷ್ಣಭಟ್ಟ (ಎಸ್)
ಆಂಗ್ಲ ಕಾವ್ಯಗಳಲ್ಲಿ ನೈಟಿಂಗೇಲ್ ಪಕ್ಷಿ [೫-೧. ಜೂನ್ ೧೯೭೪.
ಪು. ೭-೧೨]

೧೩೭ —
ಜೂಲಿಯಸ್ ಸೀಸರ್ ನಾಟಕದ ನಾಯಕ ಯಾರು? [೫-೨. ಡಿಸೆಂ.
೧೯೭೪. ಪು. ೭೨-೭೫]

೧೩೮ ಪ್ರಸನ್ನ (ಎ.ಎನ್)

ಬ್ರೆಕ್ಟನ ಮೂರು ನಾಟಕಗಳು [೬೩-೨. ಡಿಸೆಂ. ೧೯೭೮. ಪು. ೩೬-೪೮]

೧೩೯ ವೆಂಕಟೇಶಯ್ಯ (ಎಂ.ಜಿ)

ಷೈಲಾಕ್ ಪಾತ್ರ ವಿವೇಚನೆ [೫೭-೨. ಡಿಸೆಂ. ೧೯೭೨. ಪು. ೩೨-೬೪]

ಫ್ರೆಂಚ್ :

೧೪೦ ಅಶೋಕ (ಟಿ.ಪಿ)

ಆಲ್ಬರ್ಟ್ ಕಾಮೂನ ಸಾಹಿತ್ಯ ವಿಚಾರಗಳು [೬೪, ೧-೨. ಜೂನ್/ಡಿಸೆಂ. ೧೯೭೯. ಪು. ೩-೭]

## ತರ್ಕಶಾಸ್ತ್ರ

೧೪೧ ನರಸಿಂಹನ್ (ಎಂ.ಎನ್)

ಭಾರತೀಯ ತರ್ಕಶಾಸ್ತ್ರದ ರೂಪರೇಖೆಗಳು [೫೯-೨. ಡಿಸೆಂ. ೧೯೭೪. ಪು. ೬೫-೭೧; ೬೦-೧. ಜೂನ್ ೧೯೭೫. ಪು. ೫೨-೬೪; ೬೧-೧. ಜೂನ್ ೧೯೭೬. ಪು. ೫೫-೬೮; ೬೧-೨ ಡಿಸೆಂ. ೧೯೭೬. ಪು. ೩೫-೫೪]

## ದರ್ಶನ

೧೪೨ ರಾಘವಾಚಾರ್ (ಎಸ್. ಎಸ್)

ರಾಮಾನುಜರ ದೃಷ್ಟಿ ವೈಶಿಷ್ಟ್ಯ [೫೯-೨. ಡಿಸೆಂ. ೧೯೭೪. ಪು. ೩೯-೫೨]

## ಧರ್ಮ

೧೪೩ ಉಪಾಧ್ಯೆ (ಆ. ನೇ)

ಪುರುಷವ್ರತದ ನಿಶ್ಚಿತ ಅರ್ಥ [೫೯-೧. ಜೂನ್ ೧೯೭೪. ಪು. ೬೨-೬೮]

೧೪೪ ಭುಜಬಲಿಶಾಸ್ತ್ರಿ (ಕೆ)

ದಶಭಕ್ತ್ಯಾದಿ ಮಹಾಶಾಸ್ತ್ರ (ವರ್ಧಮಾನ ಮುನಿ) [೫೮-೧. ಜೂನ್ ೧೯೭೩. ಪು. ೨೪-೩೬]

## ಸಮಾಜಶಾಸ್ತ್ರ

### ಮಕ್ಕಳು :

೧೪೫ ಕಂಬಾರ (ಚಂದ್ರಶೇಖರ)
ದಲಿತ ಮಕ್ಕಳು ಮತ್ತು ಶಿಕ್ಷಣ [೬೪, ೧-೨. ಜೂನ್/ಡಿಸೆಂ. ೧೯೭೯. ಪು. ೭೬-೭೮]

೧೪೬ ವೆಂಕಟರಾಮಯ್ಯ (ಜಾಣಗೆರೆ)
ಗ್ರಾಮಾಂತರ ದಲಿತ ಮಕ್ಕಳ ಶೋಷಣೆ [೬೪, ೧-೨. ಜೂನ್/ಡಿಸೆಂ. ೧೯೭೯. ಪು. ೬೬-೭೫]

೧೪೭ ಶ್ರೀನಿವಾಸ್ (ಶೂದ್ರ)
ಯಂತ್ರಗಳ ನಡುವೆ ಹಂಚಿಹೋಗಿರುವ ಮಕ್ಕಳು [೬೪, ೧-೨. ಜೂನ್/ಡಿಸೆಂ. ೧೯೭೯. ಪು. ೬೩-೬೬]

### ಮಹಿಳೆ :

೧೪೮ ರಂಗಮುತ್ತಯ್ಯ
ಮಹಿಳೆಯರೂ ದಲಿತರೇ ? [೬೪, ೧-೨. ಜೂನ್/ಡಿಸೆಂ. ೧೯೭೯ ಪು. ೫೮-೬೨]

## ಕಲೆಗಳು

೧೪೯ ಅನಂತರಂಗಾಚಾರ್ (ಎನ್)
ಚತುಷ್ಷಷ್ಠಿ ಕಲೆಗಳು [೬೬-೨; ೬೭-೧. ಡಿಸೆಂ. ೧೯೮೧ ಮತ್ತು ಜೂನ್ ೧೯೮೨. ಪು. ೫೯-೭೨]

೧೫೦ ಸೀತಾರಾಮಯ್ಯ (ಎಂ.ವಿ)
ಬೃಹದ್ದೇಶಿ (ಪರಿಚಯಾತ್ಮಕ ಲೇಖನ) [೬೨, ೧-೨. ಜೂನ್/ಡಿಸೆಂ. ೧೯೭೭. ಪು. ೮೨-೧೧೨]

## ಇತಿಹಾಸ, ಶಾಸನಗಳು, ಸಂಶೋಧನೆ

೧೫೧ ಅಣ್ಣಿಗೇರಿ (ಎ. ಎಂ)
ಮುಂಡರಗಿ ತಹಶೀಲಿನ ಪ್ರಾಚೀನ ಚರಿತ್ರೆ [೬೦-೧. ಜೂನ್ ೧೯೭೫. ಪು. ೮೧-೮೮ ; ೬೦-೨. ಡಿಸೆಂ. ೧೯೭೫. ಪು. ೧೨-೩೨; ೬೧-೧. ಜೂನ್ ೧೯೭೬. ಪು. ೨೫-೩೫]

೧೫೨ ದೇವರಕೊಂಡಾರೆಡ್ಡಿ
ಕರ್ನಾಟಕದ ಹತ್ತನೆಯ ಶತಮಾನದ ಕೆಲವು ಸ್ಥಳನಾಮಗಳು [೬೩–೧. ಜೂನ್ ೧೯೭೮. ಪು. ೭೬–೮೦]

೧೫೩ ವೆಂಕಟಾಚಲಶಾಸ್ತ್ರೀ (ಟಿ.ವಿ)
ಬೆಂಗಳೂರು ಜಿಲ್ಲೆ: ಇತಿಹಾಸ, ಸಾಹಿತ್ಯ [೫೯–೨. ಡಿಸೆಂ. ೧೯೭೪. ಪು. ೨೪–೩೩]

**ಶಾಸನಗಳು:**

೧೫೪ ಕೃಷ್ಣಮೂರ್ತಿ (ಪಿ.ವಿ)
ಚಂಗಾಳ್ವ ನಂಜುಂಡೊಡೆಯನ ಶಾಸನ [೬೭–೨. ಡಿಸೆಂ. ೧೯೮೨. ಪು. ೯೪–೧೦೨]

೧೫೫ ಗುರವ (ಆರ್. ಎನ್)
ಕಲಚುರಿ ಪೆರ್ಮಾಡಿದೇವನ ಕೊಕಟನೂರ ಶಾಸನ (ಕ್ರಿ.ಶ. ೧೧೨೬) [೬೫, ೧–೨. ಜೂನ್/ಡಿಸೆಂ. ೧೯೮೦. ಪು. ೨೧–೨೯]

೧೫೬ ಜಾಗೀರ್‌ದಾರ್ (ಸೀತಾರಾಮ)
ಅನುಬಂಧ (ಆಂಧ್ರಪ್ರದೇಶದ ಕರೀಂ ನಗರದಲ್ಲಿರುವ ಸ್ತಂಭ ಶಾಸನ) [೬೦–೨. ಡಿಸೆಂ. ೧೯೭೫. ಪು. ೫೦–೫೬]

೧೫೭ ದೇವರಕೊಂಡಾರೆಡ್ಡಿ
ಕುತ್ತೂರ ಸಿಂಹವರ್ಮನ ತಾಮ್ರಶಾಸನ [೬೬–೨; ೬೭–೧. ಪು. ೧೫–೨೬]

೧೫೮ —
ಬೂದಿಹಾಳಿನ ನಾಯಿಂದರ ಶಾಸನ [೬೫, ೧–೨. ಜೂನ್/ಡಿಸೆಂ. ೧೯೮೦. ಪು. ೮೦–೮೬]

೧೫೯ ನೇಗಿನಹಾಳ (ಎಂ.ಬಿ)
ಹಲ್ಮಿಡಿ ಶಾಸನದ ಅರ್ಥ ವಿವೇಚನೆ [೬೬–೨; ೬೭–೧. ಡಿಸೆಂ. ೧೯೮೧; ಜೂನ್ ೧೯೮೨. ಪು. ೭೩–೮೫]

೧೬೦ ವೆಂಕಟೆಸುಬ್ಬಯ್ಯ (ಗರ್ಗೇಶ್ವರಿ)
“ರಟ್ಟಮತ”ದ ಕರ್ತೃ ಅರ್ಹದ್ದಾಸ ಮತ್ತು ಶ್ರವಣಬೆಳಗೊಳದ ಸಿದ್ಧರ ಬಸದಿ ಶಾಸನ [೬೧–೨. ಡಿಸೆಂ. ೧೯೭೬. ಪು. ೧೮–೨೩]

೧೬೧ —
“ಅರ್ಹದ್ದಾಸ ಮತ್ತು ಶ್ರವಣಬೆಳಗೊಳದ ಸಿದ್ಧರ ಬಸದಿ ಶಾಸನ” (ಆಕ್ಷೇಪಣೆಗೆ ಉತ್ತರ) [೬೫, ೧–೨. ಜೂನ್/ಡಿಸೆಂ. ೧೯೮೦. ಪು. ೪೫–೪೮]

## ಸಂಶೋಧನೆ :

೧೬೨ ಕೃಷ್ಣಮೂರ್ತಿ (ಕೆ)
ಸಾಯಣಾಚಾರ್ಯರು ಆಂಧ್ರದವರೆ? ಅಥವಾ ಕರ್ಣಾಟಕದವರೆ?
[೫೬–೨. ಡಿಸೆಂ. ೧೯೭೧. ಪು. ೯೧–೯೪]

೧೬೩ ಫೆಲಿಯೋಜಾ (ವಸುಂಧರ)
ಕಂದುಕ ಕಾಲಿಯ ಮರ್ದನ ಕೃಷ್ಣ [೬೨, ೧–೨. ಜೂನ್/ಡಿಸೆಂ. ೧೯೭೭.
ಪು. ೩೨–೩೮]

# ಲೇಖಕರ ಸೂಚಿ

(ಅಕಾರಾದಿ)

* *

## ಸಂಪಾದಕೀಯ

ಪರಿಷತ್ಪತ್ರಿಕೆಯ ಧೋರಣೆಗೆ ಸರಿಹೊಂದುವ ಲೇಖನಗಳನ್ನು ಕಳುಹಿಸುತ್ತಿರುವ ಲೇಖಕರಿಗೆ ಮೊದಲು ಧನ್ಯವಾದಗಳನ್ನು ಸಲ್ಲಿಸಬೇಕಾಗಿದೆ. ಈ ಪತ್ರಿಕೆ ತನ್ನ ಜಾಡಿನಲ್ಲಿ ಮುಂದುವರಿಯಲು ಇಂತಹವರು ನೀಡುತ್ತಿರುವ ಸಹಕಾರ ಖಂಡಿತ ಅಭಿನಂದನೀಯ. ಸಂಶೋಧನಾತ್ಮಕ ಹಾಗೂ ಅಧ್ಯಯನಾತ್ಮಕ ಬರಹಗಳನ್ನು ಹೆಚ್ಚು ಹೆಚ್ಚಾಗಿ ಆಹ್ವಾನಿಸಲು, ಪ್ರಕಟಿಸಲು ಇನ್ನು ಮುಂದೆಯೂ ಪ್ರಯತ್ನಿಸಲಾಗುವುದು. ಪತ್ರಿಕೆಯ ಬೆಳವಣಿಗೆಯ ದೃಷ್ಟಿಯಿಂದ ಇದು ತೃಪ್ತಿದಾಯಕವೆನಿಸಿದರೂ ಪ್ರಕಟಿತ ಲೇಖನಗಳ ವಿಚಾರದಲ್ಲಿ ಸಂಬಂಧಿಸಿದ ಕ್ಷೇತ್ರಗಳಲ್ಲಿ ಕೆಲಸ ಮಾಡುತ್ತಿರುವ ಪಂಡಿತರು ಗಮನ ಹರಿಸುತ್ತಿರುವರೇ ಇಲ್ಲವೇ ಎಂಬುದನ್ನು ಲಕ್ಷಿಸಬೇಕಾಗುತ್ತದೆ. ಅಚ್ಚಾದ ಲೇಖನಗಳ ಬಗೆಗೆ ಯುಕ್ತವಾದ, ಮುಕ್ತವಾದ ಹಾಗೂ ಆರೋಗ್ಯಕರ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸುವುದು ಇಲ್ಲವೇ ಚರ್ಚೆಯನ್ನು ನಡೆಸಿದರಷ್ಟೆ ಲೇಖನ ಪ್ರಕಟವಾದುದಕ್ಕೆ ಸಾರ್ಥಕ ಎಂಬ ವಿಚಾರದಲ್ಲಿ ಸಂದೇಹವಿಲ್ಲ. ಪರಿಷತ್ಪತ್ರಿಕೆಯು ಪ್ರಕಟಿಸುವ ಎಲ್ಲ ಪ್ರಕಾರಗಳ ಲೇಖನಗಳ ಬಗೆಗೆ ಆಯಾ ವಿಭಾಗಗಳ ವಿದ್ವಾಂಸರಿಂದ ಟೀಕೆ-ಟಿಪ್ಪಣಿಗಳನ್ನು ನಿರೀಕ್ಷಿಸುತ್ತೇವೆ ಹಾಗೂ ಆಹ್ವಾನಿಸುತ್ತೇವೆ.

# ಪರಿಷತ್ಪತ್ರಿಕೆ ಲೇಖಕರ ವಿಳಾಸ

೧. ಡಾ|| ಟಿ. ವಿ. ವೆಂಕಟಾಚಲ ಶಾಸ್ತ್ರೀ
ಉಪ ಪ್ರಾಧ್ಯಾಪಕರು, ಕನ್ನಡ ಅಧ್ಯಯನ ಸಂಸ್ಥೆ, ಮಾನಸಗಂಗೋತ್ರಿ
ಮೈಸೂರು–೫೭೦ ೦೦೬

೨. ಎಚ್. ಎಸ್. ಗೋಪಾಲರಾಯ
ಕಿರಿಯ ಅಭಿಯಂತ, ಉತ್ತರ – ೬ನೇ ಉಪವಿಭಾಗ
ಕರ್ನಾಟಕ ವಿದ್ಯುಚ್ಛಕ್ತಿ ಮಂಡಳಿ, ಗಂಗೇನಹಳ್ಳಿ
ಬೆಂಗಳೂರು–೫೬೦ ೦೩೨

೩. ಟಿ. ಆರ್. ಮಹಾದೇವಯ್ಯ
ಉಪ ಸಂಪಾದಕರು, ಕನ್ನಡ ನಿಘಂಟು ವಿಭಾಗ,
ಕನ್ನಡ ಸಾಹಿತ್ಯ ಪರಿಷತ್ತು, ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ
ಬೆಂಗಳೂರು–೫೬೦ ೦೧೮

೪. ಹಂಪ. ನಾಗರಾಜಯ್ಯ
೧೧೦೭, ೫ನೇ ಬ್ಲಾಕ್, ರಾಜಾಜಿನಗರ
ಬೆಂಗಳೂರು–೫೬೦ ೦೧೦

೫. ಎಸ್. ಶಿವಣ್ಣ
ಸಂಪಾದಕರು, ಹಸ್ತಪ್ರತಿ ವಿಭಾಗ, ಕನ್ನಡ ಅಧ್ಯಯನ ಕೇಂದ್ರ
ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು–೫೬೦ ೦೫೬

೬. ಡಾ|| ಎಂ. ಬಿ. ನೇಗಿನಹಾಳ
ಕನ್ನಡ ಉಪನ್ಯಾಸಕರು, ಜಿ. ಎಚ್. ಕಾಲೇಜು
ಹಾವೇರಿ–೫೮೧ ೧೧೦

೭. ಟಿ. ವಿ. ವೆಂಕಟರಮಣಯ್ಯ
೮೨೧, ಮಹಾಲಕ್ಷ್ಮಿ ಬಡಾವಣೆ, ರಾಜಾಜಿನಗರ
ಬೆಂಗಳೂರು–೫೬೦ ೦೧೦

(ರಕ್ಷಾಪತ್ರದ ೨ನೇ ಪುಟದಿಂದ ಮುಂದುವರಿದುದು)

ಮಣಿಪಾಲ (೨೭) ಜೀವನ ವಿಕಾಸ, ಕಲಬುರ್ಗಿ (೨೮) ದೀರ್ಘಾಯು, ಬೆಂಗಳೂರು (೨೯) ಗ್ರಂಥಲೋಕ, ಮೈಸೂರು (೩೦) ಪುಸ್ತಕ ಪುರವಣಿ, ಮೈಸೂರು (೩೧) ಸಪ್ತಗಿರಿ, ತಿರುಪತಿ (೩೨) ರೂಪತಾರಾ, ಮಣಿಪಾಲ (೩೩) ಮಲ್ಲಿಗೆ, ಬೆಂಗಳೂರು (೩೪) ಜನಪದ, ಬೆಂಗಳೂರು (೩೫) ಪತ್ರಕರ್ತ, ಬೆಂಗಳೂರು (೩೬) ಸನ್ಮತಿ, ಕೊಲ್ಹಾಪುರ (೩೭) ಕಲಾ ದರ್ಶನ, ಮಂಗಳೂರು (೩೮) ಕಲಾಪ್ರಪಂಚ, ಗದಗ (೩೯) ಆರ್ಯಸಂಸ್ಕೃತಿ, ಮೈಸೂರು (೪೦) ಇತಿಹಾಸ ಚಂದ್ರಿಕೆ, ತುಮಕೂರು.

ದ್ವೈಮಾಸಿಕ: (೧) ಬಸವಪಥ, ಬೆಂಗಳೂರು. (೨) ಜಾನಪದ ಜಗತ್ತು, ಬೆಂಗಳೂರು

ತ್ರೈಮಾಸಿಕ: (೧) ಕರ್ನಾಟಕ ಭಾರತಿ, ಧಾರವಾಡ (೨) ಕರ್ನಾಟಕ ಗ್ರಂಥಾಲಯ, ಧಾರವಾಡ (೩) ಸಂಕ್ರಮಣ, ಧಾರವಾಡ (೪) ಪ್ರಬುದ್ಧ ಕರ್ಣಾಟಕ, ಮೈಸೂರು (೫) ಮಾನವಿಕ ಕರ್ಣಾಟಕ, ಮೈಸೂರು (೬) ಜ್ಞಾನ ಸುಧಾ, ಬೆಂಗಳೂರು (೭) ಸಾಧನೆ, ಬೆಂಗಳೂರು (೮) ಆಹಾರ ವಿಜ್ಞಾನ, ಬೆಂಗಳೂರು (೯) ಮೈಸೂರು ಸಕ್ಕರೆ, ಮಂಡ್ಯ (೧೦) ತರಳುಬಾಳು, ಸಿರಿಗೆರೆ (೧೧) ಪ್ರಕೃತಿ ಜೀವನ, ಬೆಂಗಳೂರು (೧೨) ಯುಗರಶ್ಮಿ, ಮಂಗಳೂರು.

**Fortnightly:** (1) Democratic Germany, New Delhi (2) Indian Libertarian, Bangalore (3) News from Isreil, Bombay (4) Pigmy, Manipal (S.K.).

**Monthly:** (1) Culture & Life, U.S.S.R. (2) Dasajyothi, Bangalore (3) Soviet Literature, Leningrad, U. S. S. R. (4) Public Affairs, G.I.P.A., Bangalore (5) Indian P. E. N., Bombay (6) The Journal of Mysore, State Education Federation, Bangalore (7) Mysore Information Bulletin, Bangalore (8) Soviet Land, New Delhi (9) The Sahitya Academy of Letters, New Delhi (10) The American Reporter, New Delhi (11) Bulletin–Institute for the Study of the U.S.S.R., Germany (12) The Book Maker, Madras (13) Karnataka Heritage, Bangalore.

**Bi-Monthly:** (1) The Journal of the University of Bombay.

**Quarterly:** (1) Journal of the Mythic Society, Bangalore (2) Bulletin of the Deccan College Research Institute, Poona (3) Bulletin of the School of Oriental and African Studies, London University, London (4) Journal of the Shivaji University, Kolhapur.

**Half-Yearly:** (1) Half-Yearly Journal of the Mysore University.

B.M.S. Press, Kannada Sahitya Parishat, Bangalore–18

## 'ಬೆಳ್ಳಿ ಬಿಟ್ಟ ಬಳ್ಳಿ' ಮಾಲೆಯ ಪುಸ್ತಕಗಳು

ಬರಕೋ ಪದಾ ಬರಕೋ ○ ಗೊಮ್ಮಟೇಶ್ವರ ಚರಿತೆ ○ ನಿಂಬ ಸಾಮಂತ ಚರಿತೆ ○ ಕುಮುದೇಂದು ರಾಮಾಯಣ ○ ಕಂನುಡಿಯ ಹುಟ್ಟು ○ ಸಾಹಿತ್ಯ ವಿಹಾರ ○ ತೊರವೆ ರಾಮಾಯಣ ಕಥಾವಸ್ತು ವಿವೇಚನೆ ○ ಕನ್ನಡ ಪ್ರತಿಭಟನೆ ಕಾವ್ಯ ○ ಅಮೆರಿಕದಲ್ಲಿ ಗೊರೂರು ○ ಮಹಾಭಾರತದ ಭೀಮ ○ ರಂಗಗೀತೆಗಳು ○ ಪಾರಿಜಾತ ○ ಜಾನಪದ ಅಧ್ಯಯನ ವಿಚಾರ ಸಂಕಿರಣ ○ ಚಿಕ್ಕಮಗಳೂರು ಸಾಹಿತ್ಯ ಸಮ್ಮೇಳನ ○ ಚಂದುಳ್ಳಿ ಮಕ್ಕಳ ಒಂಬತ್ತು ಕೊಡು ಸ್ವಾಮಿ ○ ದಾಸಪ್ಪ ಜೋಗಪ್ಪ ○ ಕತ್ತಾಲ ದಾರಿ ದೂರ ○ ಜಾನಪದ ಜಾಣ್ಮೆ ○ ಸುವ್ವಿ ಸುವ್ವಮ್ಮಲಾಲಿ ಸುವ್ವಲಾಲೆ ○ ತುಮಕೂರು ಜಿಲ್ಲೆಯ ಜಾನಪದ ನಂಬಿಕೆಗಳು ○ ಮುತ್ತು ಮುತ್ತಿನ ತ್ವಾಟ ○ ಬಣ್ಣವಾಡು ○ ಮೂವತ್ತು ಜನಪದ ಕಥೆಗಳು ○ ಜಾನಪದ ಅಧ್ಯಯನ ಸಂಕ್ಷಿಪ್ತ ಇತಿಹಾಸ ○ ಉತ್ತರ ಕನ್ನಡದ ಹವ್ಯಕರ ಜನಪದ ಕತೆಗಳು ○ ಐವರು ಹೇಳಿದ ಜಾನಪದ ಕಥೆಗಳು ○ ಧರ್ಮದೇವತೆ ○ ಜನಪದ ಬಸವ ಪುರಾಣ ○ ಸಾತು ಕ್ಯಾಮಣ್ಣನ ಲಾವಣಿಗಳು ○ ಬೆಳವಲ ಬೆಳಕು ○ ವಡ್ಡಗೆರೆ ನಾಗಮ್ಮ ○ ಎರಡು ಕಿನ್ನರಿಜೋಗಿ ಕಾವ್ಯಗಳು ○ ಉತ್ತರ ಕರ್ನಾಟಕದ ಬೈಗುಳಗಳು ○ ಗ್ರಾಮೀಣ ಗಾದೆಗಳು ○ ಜನಪದ ಶಿಶುಪ್ರಾಸಗಳು ○ ಗುಲಗಂಜಿ ಮಾದೇವಿ ○ ಹಸರ ಗಿಡದ ಮ್ಯಾಲ ಮೊಸರ ಚೆಲ್ಲೀದ ○ ಸಂಸಾರಿ ಹೆಚ್ಚೋ ಸಂನ್ಯಾಸಿ ಹೆಚ್ಚೋ ○ ಜನಪದ ಒಡಪುಗಳು ○ ಹಳ್ಳಿ ಹಬ್ಬಿಸಿದ ಹೂ ಬಳ್ಳಿ ○ ಜನಪದದಲ್ಲಿ ಮಳೆರಾಯನ ಮುನಿಸು ○ ಲಂಬಾಣಿಗರ ಜನಪದ ಗೀತೆಗಳು ○ ಕಥೆ ಕೇಳೇ ಗುಬಲಾಡಿ ○ ಎಣ್ಣೆಗೆರೆಯ ಜನಪದ ಗೀತೆಗಳು ○ ಲಂಬಾಣಿ ಗಾದೆಗಳು ○ ನಲ್ಲೂರು ದೊರೆಕಾಳಿ ○ ಕನ್ನಡ ನಾಟಕ ಸಂಪುಟ ○ ಕೋಲಾಟದ ಪದಗಳು ○ ಮರಾಠಿ ಲೋಕಸಾಹಿತ್ಯ ○ ಜನಪದ ಜೀವನ ತರಂಗಗಳು ○ ಬಂದೀರೆ ನನ್ನ ಜಡೆವೊಳಗೆ ○ ಕರ್ನಾಟಕದ ವೀರಗಲ್ಲುಗಳು ○ ಜನಪದ ಕಲಾವಿದರ ಸೂಚಿ ○ ಕನ್ನಡ ಗಾದೆಗಳ ಮಹಾಕೋಶ ಸಂಪುಟ-೧, ೨ ○ ಕಾದಂಬರಿಕಾರನ ಕಥೆ ○ ನಾನು ಯಾರು? ○ ಜನಪದ ಝೇಂಕಾರ ○ ನಮ್ಮ ಕಣ್ಣು ○ ರಿವಾಯತ ಪದಗಳು ○ ಕನ್ನಡ ಜನಪದ ಕಥೆಗಳು ○ ಹಠಮಾರಿ ಹೆಣ್ಣು ಮತ್ತು ಇತರ ಜನಪದ ಕಥೆಗಳು ○ ಕೋಲಾಟಗಳು ಮತ್ತು ಕೋಲುಪದಗಳು ○ ನಾನೊಂದು ಕನಸು ಕಂಡೆ (ಕಮಲಾದೇವಿ ಚಟ್ಟೋಪಾಧ್ಯಾಯರ ಜೀವನ ಚರಿತ್ರೆ) ○ ಮಹಿಳೆಯರ ಕೆಲವು ಮರಾಠಿ ಕಥೆಗಳು ○ ಶಿವಗಂಗೆ ಸುತ್ತಿನ ಜನಪದ ಕಥೆಗಳು ○ ಭಾರತದ ಪ್ರಾಚೀನ ವಿದ್ಯಾಪೀಠಗಳು ○ ಕನ್ನಡ ವೃತ್ತಿಗಾಯಕ ಕಾವ್ಯಗಳು ○ ಬಸವರಾಜ ○ ಉತ್ತಂಗಿ ಚನ್ನಪ್ಪ ○ ಮಡಿಕೇರಿ ಸಾಹಿತ್ಯ ಸಮ್ಮೇಳನ ○ ಅಖಿಲ ಕರ್ನಾಟಕ ಲೇಖಕಿಯರ ಸಮ್ಮೇಳನ ○ ರಿವಾಯತಗಳು ○ ನಮ್ಮ ಲೇಖಕಿಯರು ○ ಚಿನ್ನದ ಕದರ್ಬಾಂಗೆ ಸಲಹಿನಿ ○ ರುದ್ರಭಟ್ಟ ಕವಿ ○ ಕವಿ ಲಕ್ಷ್ಮೀಶ ○ ಕೊಡವ ಕನ್ನಡ ನಿಘಂಟು ○ ನಮ್ಮ ಕರ್ನಾಟಕ

ವಿವರಗಳಿಗೆ ಬರೆಯಿರಿ

ಕನ್ನಡ ಸಾಹಿತ್ಯ ಪರಿಷತ್ತು / ಚಾಮರಾಜಪೇಟೆ / ಬೆಂಗಳೂರು-೫೬೦ ೦೧೮